# ನಮ್ಮ ಮಾನಸ

ಸಂಪುಟ : 1 ಮಾರ್ಚ್ 2013 ಸಂಚಿಕೆ: 1 ಬೆಲೆ: 25/-



"ನನ್ನ ಹೊಟ್ಟೆ ತುಂಬುವುದು
ಪುರಸ್ಕಾರಗಳಿಂದಲ್ಲ; ನ್ಯಾಯದಿಂದ"
-ಭಾಂವ್ರಿ ದೇವಿ

# ನಮ್ಮ ಮಾನಸ

ಮಾರ್ಚ್ 2013
ಸಂಪುಟ : 1 ಸಂಚಿಕೆ : 1

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*



*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **25–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

*ಪ್ರಾಯೋಜಕರು:*
**ಬಿ.ಎಚ್. ರಮಾಕುಮಾರಿ**
**ಅನ್ನಪೂರ್ಣ ವೆಂಕಟನಂಜಪ್ಪ**
**ಹಾಗೂ**
**ಮಾನಸ ಬಳಗ**

**ನಮ್ಮ ಮಾನಸ**
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

**ಪ್ರಾರಂಭ : 'ಮಾನವಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**

## ಒಳಗಿನ ಪುಟಗಳಲ್ಲಿ....



## ಸಹೃದಯ ಓದುಗರಲ್ಲಿ...

ನೀವು ನಮ್ಮ ಚಿಂತನೆ–ಗುರಿಯನ್ನು ಬಲಪಡಿಸುವಿರೆಂದು ನಮಗೆ ನಂಬಿಕೆ ಇದೆ. ನೀವು ಓದುತ್ತಿರುವ 'ನಮ್ಮ ಮಾನಸ'ವನ್ನು ಹೊರತರಲು ನಿಮ್ಮ ಆರ್ಥಿಕ ನೆರವು, ಪ್ರೋತ್ಸಾಹ ಮುಖ್ಯ. 'ನಮ್ಮ ಮಾನಸ'ವನ್ನು ಮತ್ತೊಮ್ಮೆ ನಿರಂತರವಾಗಿ ಜೀವಂತವಾಗಿಡಲು ಸಹೃದಯ ಓದುಗರ ಬೆಂಬಲದ ಅಗತ್ಯವಿದೆ. ನೀವು ಯಾವುದಾದರೊಂದು ಬಗೆಯಲ್ಲಿ ನಮ್ಮೊಂದಿಗೆ ಕೈಜೋಡಿಸಬಹುದು.

- ಪ್ರತಿ ಸಂಚಿಕೆಗೆ ಲೇಖನಗಳನ್ನು ಬರೆಯಿರಿ ಇಲ್ಲವೇ ಬೇರೆಯವರಿಂದ ಬರೆಯಿಸಿ ಕಳುಹಿಸಿ.
- ವಾರ್ಷಿಕ ಚಂದಾದಾರರಾಗಿ ಮತ್ತು ಇನ್ನಷ್ಟು ಚಂದಾದಾರರನ್ನು ಪರಿಚಯಿಸಿ.
- ಮಾನಸದ ಒಂದು ಸಂಚಿಕೆಯ ಮುದ್ರಣದ ಖರ್ಚು ರೂ. 7,000/–ರಲ್ಲಿ ಪೂರ್ತಿ ಇಲ್ಲವೇ ನಿಮಗೆ ಸಾಧ್ಯವಾದಷ್ಟು ಹಣವನ್ನು ಕೊಟ್ಟು ಬೆಂಬಲಿಸಿ ಕೈ ಜೋಡಿಸುವಿರೆಂಬ ಆಶಯದೊಂದಿಗೆ,

**ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ**

E-mail: nammamanasa@gmail.com
Contact: Disha K.R.: 9880467372, Lekha: 9686757053,
Niharika : 77609 70430, Nirmala K.: 98869 18910

ಚಿತ್ರಕೃಪೆ: ಅಂತರಜಾಲ



ಸಂಪಾದಕೀಯ

# ಒಪ್ಪಿತ ಲೈಂಗಿಕ ಕ್ರಿಯೆಗೆ ಬೇಕಾಗಿರುವುದು ವಯಸ್ಸಿನ ಮಿತಿ ಅಲ್ಲ; ಸರಿಯಾದ ಶಿಕ್ಷಣ

ಕಳೆದ ಡಿಸೆಂಬರ್‌ನಲ್ಲಿ ನಡೆದ ಡೆಲ್ಲಿ ರೇಪ್ ಪ್ರಕರಣ ದೇಶಾದ್ಯಂತ ಯುವಜನರಲ್ಲಿ ಪ್ರತಿಭಟಿಸುವಂತಹ ಕಿಚ್ಚನ್ನು ಹೊತ್ತಿಸಿತು. ರಾಷ್ಟ್ರಪತಿ ಭವನ ಮುತ್ತಿಗೆ ಹಾಕುವ ಮಟ್ಟಿಗೆ ಈ ಪ್ರಕರಣ ಕಾವೇರಿಸಿತು. ಈ ಬೃಹತ್ ಪ್ರತಿಭಟನೆಯ ಪ್ರತಿಫಲವಾಗಿ ಸರ್ಕಾರ ಜಸ್ಟೀಸ್ ವರ್ಮ ಕಮಿಷನ್ ಅನ್ನು ರಚಿಸಿತು. ದೀರ್ಘ ಚರ್ಚೆಗಳ ನಂತರ ವರ್ಮ ಕಮಿಷನ್ನಿಂದ ಹೊರಬಿದ್ದ ವರದಿಯಲ್ಲಿ ಹೆಣ್ಣುಮಕ್ಕಳ ಪರವಾಗಿ ಹಲವಾರು ಕಾನೂನಿನ ರಚನೆಯ ಪ್ರಸ್ತಾಪವಿದ್ದು ಅದರಲ್ಲಿ ಬಹಳಷ್ಟನ್ನು ಸರ್ಕಾರ ಸ್ವಾಗತಿಸಿದೆ. ಇದರ ನಡುವೆಯೇ ಚರ್ಚೆಗೆ ಒಳಗಾದ ವಿಷಯವೆಂದರೆ – ಒಪ್ಪಿತ ಲೈಂಗಿಕ ಕ್ರಿಯೆಯ ವಯಸ್ಸಿನ ಮಿತಿಯನ್ನು 18ರಿಂದ 16ರಕ್ಕೆ ಇಳಿಸಬೇಕೋ ಬೇಡವೋ ಎಂಬುದು. ಆದರೆ ವಿಚಿತ್ರ ಎಂದರೆ ನವೆಂಬರ್ 2012ರಲ್ಲಷ್ಟೆ ವಯಸ್ಸಿನ ಮಿತಿಯನ್ನು 16ರಿಂದ 18ಕ್ಕೆ ಏರಿಸಲಾಗಿತ್ತು. ಅಲ್ಲಿಯ ತನಕ ವಯಸ್ಸಿನ ಮಿತಿ ಇದ್ದದ್ದು 16ಕ್ಕೆ !!

ಈ ಸಂಗತಿ ದೇಶಾದ್ಯಂತ ಚರ್ಚೆಗೊಳಪಟ್ಟಿತು. ಮಹಿಳಾ ಚಳುವಳಿಗಾರರಿಂದಲೇ ಎರಡು ರೀತಿಯ ಪ್ರತಿಕ್ರಿಯೆ ದೊರೆತವು, ಪರ ಹಾಗೂ ವಿರೋಧ. ಕೆಲವರಿಗೆ ಒಪ್ಪಿತ ಲೈಂಗಿಕ ಕ್ರಿಯೆಯ ವಯಸ್ಸಿನ ಮಿತಿ 16ರಿರಬೇಕಾದರೆ, ಇನ್ನು ಕೆಲವರಿಗೆ 18. ಸರ್ಕಾರ ಕಡೆಯಲ್ಲಿ ವಯಸ್ಸಿನ ಮಿತಿ 18 ಎಂದೇ ಪರಿಗಣಿಸಿತು.

ಈ ವಿಷಯವನ್ನು ಸೂಕ್ಷ್ಮವಾಗಿ ಗಮನಿಸಿದರೆ ವಯಸ್ಸಿನ ಮಿತಿ 16 ಆದರೂ 18 ಆದರೂ ಯಾವ ವ್ಯತ್ಯಾಸವೂ ಇಲ್ಲ. ಆದರೆ ನಮ್ಮ ಸಮಾಜ ರಚನೆಯಾಗಿರುವ ಪರಿ, ಈಗಿನ ಸಾಮಾಜಿಕ ಸ್ಥಿತಿ, ಮಕ್ಕಳ ಮನಸ್ಥಿತಿ, ಶಿಕ್ಷಣ ಪದ್ಧತಿ ಎಲ್ಲವೂ ಈ ನಿಲುವಿಗೆ ಮುಖ್ಯವಾಗುತ್ತದೆ.

ವಯಸ್ಸಿನ ಮಿತಿ 16ಕ್ಕೆ ಇಳಿಸುವುದರಿಂದ ಕೆಲವು ಸಮಸ್ಯೆಗಳು ಎದುರಾಗುವ ಸಾಧ್ಯತೆಗಳಿವೆ. ಕಾನೂನಿನ ಪ್ರಕಾರ ಬಾಲ್ಯ-ವಿವಾಹ ಅಪರಾಧವಾಗಿದ್ದರೂ, ಭಾರತದ ಹಲವು ಭಾಗಗಳಲ್ಲಿ ಇಂದಿಗೂ ಅದು ನಡೆದುಬರುತ್ತಲೇ ಇವೆ. ಈ ಕೆಟ್ಟ ಪದ್ಧತಿಗಾಗಿ ಈ ಕಾನೂನಿನ ದುರ್ಬಳಕೆ ಆಗುವ ಸಾಧ್ಯತೆಗಳು ಹೆಚ್ಚಿವೆ. ಸೆಕ್ಸ್ ದಂಧೆಗೆ ಮಕ್ಕಳನ್ನು ಬಲವಂತದಿಂದ ಬಳಸಿಕೊಂಡರೂ ಈ ಕಾನೂನಿನ ಮೂಲಕ ಅದು ಒಪ್ಪಿತ ಲೈಂಗಿಕ ಕ್ರಿಯೆಯಾಗಿತ್ತು ಎಂದು ಪ್ರಕರಣವನ್ನು ತಿರುಚುವ ಸಾಧ್ಯಾಸಾಧ್ಯತೆಗಳು ಹೆಚ್ಚು. ಇದರ ಜೊತೆಗೆ ಈಗಾಗಲೇ ನಮ್ಮ ಸಮಾಜದಲ್ಲಿ ತಾಂಡವ ಆಡುತ್ತಿರುವ ಪಿತೃಪ್ರಧಾನ ಮೌಲ್ಯಗಳಿಗೆ ಇನ್ನಷ್ಟು ಪುಷ್ಟಿ ಕೊಟ್ಟಂತಾಗುತ್ತದೆ.

ಇದಲ್ಲದೆ ಆರೋಗ್ಯದ ದೃಷ್ಟಿಯಿಂದ ವಯಸ್ಸಿನ ಮಿತಿ 16ಕ್ಕೆ ಇಳಿಸುವುದರಿಂದ ಚಿಕ್ಕ ವಯಸ್ಸಿನಲ್ಲಿ ಗರ್ಭಧಾರಣೆ ಹಾಗೂ ಗರ್ಭಪಾತ ಹೆಚ್ಚುತ್ತವೆ. ಇದರಿಂದ ಹೆಣ್ಣಿನ ರಿಪ್ರೊಡಕ್ಟಿವ್ ಆರೋಗ್ಯದ ಮೇಲೆ ಕೆಟ್ಟ ಪ್ರಭಾವ ಬೀರುತ್ತದೆ.

ಇನ್ನು ಹದಿಹರೆಯದ ವಯಸ್ಸಿನಲ್ಲಿ ಚಂಚಲ ಮನಸ್ಸಿನ ಆಸೆಗಳಿಗೆ, ಸೆಳೆತಗಳಿಗೆ ಒಳಗಾಗಿ ಒಂದು ಪಕ್ಷ ಮೋಸಹೊದರೆ ಕಾನೂನಿನ ಪ್ರಕಾರ ಹೋರಾಡುವ ಸಾಧ್ಯತೆಗಳೂ ಕಡಿಮೆ. ಇದೆಲ್ಲದಕ್ಕಿಂತ ಮುಖ್ಯವಾದದು ಮಕ್ಕಳ ಮನಸ್ಥಿತಿ ಹಾಗೂ ಶಿಕ್ಷಣ ಪದ್ಧತಿ. ಆಗಷ್ಟೆ 10ನೇ ತರಗತಿ ಮುಗಿಸಿ ಯಾವ ಕ್ಷೇತ್ರದೆಡೆಗೆ ಸಾಗಬೇಕೆಂಬ ನಿರ್ಧಾರವನ್ನೇ ಈಗಿನ ಮಕ್ಕಳು ತೆಗೆದುಕೊಳ್ಳಲು ಹಿಂಜರಿಯುತ್ತಿದ್ದಾರೆ. ಸಮಾಜದ ಅಥವಾ ಅಪ್ಪ-ಅಮ್ಮಂದಿರ ಒತ್ತಡಕ್ಕೆ ಮಣಿದು ಅವರ ನಿರ್ಧಾರವನ್ನು ಪಾಲಿಸುತ್ತಿರುವ ಹಾಗೂ ವೇಗವಾಗಿ ಮುಂದುವರೆಯುತ್ತಿರುವ ಈಗಿನ ಸ್ಪರ್ಧಾ ಜಗತ್ತಿನಲ್ಲಿ ಮಕ್ಕಳಿಗೆ ಒಪ್ಪಿತ ಲೈಂಗಿಕ ಕ್ರಿಯೆಯ ಹಕ್ಕನ್ನು ಇತ್ತಲ್ಲಿ ಅವರ ಪ್ರತಿಕ್ರಿಯೆ, ಯೋಚನಾ ಲಹರಿ ಹಾಗೂ ಮನಸ್ಥಿತಿ ಜಟಿಲವಾಗಬಹುದು.

ಮುಂದುವರೆಯುತ್ತಿರುವ ಈಗಿನ ಮಕ್ಕಳಲ್ಲಿ ಸಹಜವಾಗಿ ಲೈಂಗಿಕತೆಯ ಬಗೆಗೆ ಕುತೂಹಲ ಹಾಗೂ ಸೆಳೆತಗಳಿರುತ್ತವೆ. ಆದರೆ ಲೈಂಗಿಕತೆಯ ಬಗ್ಗೆ ಸಂಪೂರ್ಣ ಜ್ಞಾನ ಮತ್ತು ಅರಿವು ಇರುವುದು ಕಮ್ಮಿ. ಅದೊಂದು ದೊಡ್ಡ ಸಾಹಸವೆಂದೋ ಅಥವಾ ತಪ್ಪೆಂದೋ ತಿಳಿದ ಅವರಿಗೆ ಅದೊಂದು ಸಹಜ ಕ್ರಿಯೆ ಎಂಬ ಭಾವನೆ ಇಲ್ಲದಿರುವ ಸಾಧ್ಯತೆ ಹೆಚ್ಚು.

ಒಂದು ವೇಳೆ ಒಪ್ಪಿತ ಲೈಂಗಿಕ ಕ್ರಿಯೆಯ ವಯಸ್ಸಿನ ಮಿತಿ 16ರಾದರೆ ಆ ವಯಸ್ಸಿನ ಮಕ್ಕಳು ಲೈಂಗಿಕತೆಯ ಬಗ್ಗೆ ಆಸಕ್ತಿ ತೋರಿ ಮುಂದುವರೆದರೆ ಅವರ ನಿರ್ಧಾರದ ಜವಾಬ್ದಾರಿಯೂ ಅವರ ಹೆಗಲ ಮೇಲೆ ಇರುತ್ತದೆ. ಆದರಿಂದ ಅವರಿಗೆ ಲೈಂಗಿಕತೆಯ ಬಗ್ಗೆ ತಿಳುವಳಿಕೆ ಹಾಗೂ ಸಂಪೂರ್ಣ ಜ್ಞಾನದ ಅಗತ್ಯವಿದೆ. ಆದರೆ ಮಕ್ಕಳಿಗೆ ಆ ತಿಳುವಳಿಕೆ ನೀಡುವುದಾದರೂ ಯಾರು? ಅವರ ಅಪ್ಪ-ಅಮ್ಮಂದಿರೆ? ಗೆಳೆಯರೇ? ಈ ಕ್ರಿಯೆಯನ್ನು ಅತಿರೇಕಕ್ಕೇರಿಸುವ ಪೋರ್ನ್‌ಗಳೇ? ನಮ್ಮ ಸಮಾಜವೇ ಅಥವಾ ನಮ್ಮ ಶಿಕ್ಷಣ ವ್ಯವಸ್ಥೆಯೇ?

ಮುಖ್ಯವಾಗಿ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಬದಲಾವಣೆಯ ಅಗತ್ಯವಿದೆ. ಮಕ್ಕಳಲ್ಲಿ ಆತ್ಮವಿಶ್ವಾಸ, ಧೈರ್ಯ, ಜವಾಬ್ದಾರಿ, ಮಾನವತೆಯ ಮೌಲ್ಯಗಳನ್ನು ಬೆಳೆಸಬೇಕಾಗಿದೆ. ಶಾಲೆಗಳಲ್ಲಿ ಮುಕ್ತವಾದ, ಸೂಕ್ಷ್ಮವಾದ ಹಾಗೂ ಪ್ರಬುದ್ಧವಾದ ಲೈಂಗಿಕ ಶಿಕ್ಷಣದ ಜೊತೆಗೆ ಲಿಂಗ ಸೂಕ್ಷ್ಮತೆಯ ಬಗ್ಗೆ ಅರಿವು ದೊರೆತಲ್ಲಿ ಮಾತ್ರ ಒಪ್ಪಿತ ಲೈಂಗಿಕ ಕ್ರಿಯೆಯ ವಯಸ್ಸಿನ ಮಿತಿ 16 ಆಗಬಹುದು ಹಾಗೂ ಸಮಾಜದ ಮನಸ್ಥಿತಿಯೂ ಬದಲಾಗಬಹುದು. ❑

## ಮೊದಲ ಹೆಜ್ಜೆ...

ಫೆಬ್ರವರಿ 9 'ನಮ್ಮ ಮಾನಸ'ದ ಯುವ ತಂಡ ಹೊಸ ಹೆಜ್ಜೆ ಇಟ್ಟ ದಿನ. ನಿಮಗೆ ಮೊದಲೆ ತಿಳಿಸಿದಂತೆ ಕೆಲವು ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದೆವು. ಫೆ. 9ರಂದು ನಾವು ಭಾಂವ್ರಿದೇವಿ ಅವರನ್ನು ಕುರಿತು ಭವಂದರ್ ಎಂಬ ಚಿತ್ರದ ಪ್ರದರ್ಶನ ಹಾಗೂ ಭಾಂವ್ರಿದೇವಿಯ ಕೇಸಿನ ಕುರಿತು ಸಹೇಲಿಯ ಲಕ್ಷ್ಮೀ. ಎನ್. ಮೂರ್ತಿ ಅವರೊಂದಿಗೆ ಒಂದು ಸಂವಾದ ಕಾರ್ಯಕ್ರಮವನ್ನು ಆಯೋಜಿಸಿದ್ದೆವು. ಯುವ ಜನರನ್ನು ಆಹ್ವಾನಿಸಲೆಂದು ಕೆಲವು ಕಾಲೇಜುಗಳಲ್ಲಿ ಇದರ ಮಾಹಿತಿಯನ್ನು ಪ್ರಕಟಿಸಿದ್ದೆವು. ಬಹಳ ದೊಡ್ಡಮಟ್ಟದಲ್ಲಲ್ಲದಿದ್ದರು ಸುಮಾರು ಮೂವತ್ತೈದು ಜನರು ನಮ್ಮೊಟ್ಟಿಗೆ ಚಿತ್ರ ನೋಡಿ ಅದರ ಕುರಿತು ಚರ್ಚಿಸಿದ್ದು ನಮ್ಮ ಮೊದಲ ಹೆಜ್ಜೆಯ ಪುಟ್ಟ ಯಶಸ್ಸು. ಬಾಗವಹಿಸಿದವರ ಅಭಿಪ್ರಾಯ ಇಂತಿದೆ –

*"ಭಾಂವ್ರಿ ದೇವಿಯ ಬದುಕು, ಅವರ ಹೋರಾಟದ ಬಗ್ಗೆ ನನಗೆ ತಿಳಿಯಲು ನನಗೊಂದು ಅವಕಾಶವನ್ನು 'ನಮ್ಮ ಮಾನಸ' ಕಲ್ಪಿಸಿತು. ಮಾನಸ ಆಯೋಜಿಸಲಾಗಿದ್ದ 'ಭವಂದರ್' ಚಿತ್ರ ಪ್ರದರ್ಶನ ಹಾಗೂ ಚರ್ಚೆ ಭಾಂವ್ರಿಯ ಬದುಕಿನ ಚಿತ್ರವನ್ನು ಬಿಚ್ಚಿಟ್ಟಿತು. ಈ ಕಾರ್ಯಕ್ರಮದಿಂದ ಭಾಂವ್ರಿಯ ಕುರಿತು ವಿಷಯ ತಿಳಿದೆ. ವಾಸ್ತವದ ಸಾಮಾಜಿಕ ಸ್ಥಿತಿಯಲ್ಲಿ ಎಲ್ಲಾ ಹೆಣ್ಣುಮಕ್ಕಳು ತಮ್ಮ ಮೇಲೆ ನಡೆಯುತ್ತಿರುವ ದೌರ್ಜನ್ಯದ ವಿರುದ್ಧ ಹಾಗೂ ತಮ್ಮ ಹಕ್ಕಿಗಾಗಿ ಹೋರಾಡಲೇಬೇಕಿದೆ. ಹಾಗಾಗಿ ನಾವೆಲ್ಲರೂ ನಮ್ಮ ದೃಷ್ಟಿಕೋನವನ್ನು ಬದಲಿಸಿಕೊಳ್ಳಬೇಕಿದೆ"*

*–ರಜನಿ.*

ಮಾರ್ಚ್ 9ರಂದು ಮಹಿಳಾ ದಿನದ ಅಂಗವಾಗಿ ಬೆಂಗಳೂರಿನಲ್ಲಿ ಲೇಖಕಿಯರ ಸಂಘ ಮತ್ತು ನಮ್ಮ ಮಾನಸದ ವತಿಯಿಂದ ಭಾಂವ್ರಿಯವರೊಂದಿಗೆ ಸಂವಾದವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದಲ್ಲಿ ಹಾಡಿನ ಮೂಲಕ ಹಾಗೂ ಅವರ ದಿಟ್ಟ ಮಾತುಗಳ ಮೂಲಕ ಅಲ್ಲಿ ನೆರೆದಿದ್ದವರನ್ನೆಲ್ಲ ತಮ್ಮ ಹಕ್ಕಿಗಾಗಿ ಹೋರಾಡಲು ಭಾಂವ್ರಿ ಎಲ್ಲರನ್ನು ಹುರಿದುಂಬಿಸಿದರು.

*ಪ್ರಿಯ ಓದುಗರೆ,*

**ನಾವು ಆಯೋಜಿಸುವ ಕಾರ್ಯಕ್ರಮದ ಮಾಹಿತಿಯನ್ನು ನಿಮಗೆ ತಿಳಿಸಲು ನಿಮ್ಮ ದೂರವಾಣಿ ಸಂಖ್ಯೆ, ಇ-ಮೇಲ್ ವಿಳಾಸ ಹಾಗೂ ನಿಮ್ಮ ವಿಳಾಸವನ್ನು ನಮ್ಮ ಮೇಲ್ ಐಡಿಗೆ ಕಳುಹಿಸಿ.**

## ದಯವಿಟ್ಟು ಗಮನಿಸಿ

ಕಳೆದ ಸಂಚಿಕೆಯಲ್ಲಿ ನಮ್ಮ ಪ್ರಿಯ ಓದುಗರೆಲ್ಲರಿಗೂ ಪತ್ರಿಕೆ ಬೇಕಾದಲ್ಲಿ ಚಂದಾ ನವೀಕರಿಸಲು ಹಾಗೂ ತಮ್ಮ ವಿಳಾಸ ಮತ್ತು ದೂರಾವಾಣಿ ಸಂಖ್ಯೆಯನ್ನು ನಮಗೆ ಮೆಸೇಜ್, ಇ-ಮೇಲ್ ಅಥವಾ ಅಂಚೆ ಮಾಲಕ ದೃಢಪಡಿಸಬೇಕೆಂದು ಮನವಿಮಾಡಿಕೊಳ್ಳಲಾಗಿತ್ತು. ಆದರೆ ಇದುವರೆಗೂ ಕೆಲವೇ ಕೆಲವರು ಚಂದಾ ನವೀಕರಿಸಿರುತ್ತಾರೆ. ಹಾಗಾಗಿ ಮುಂದಿನ ಸಂಚಿಕೆಯನ್ನು ಈಗಾಗಲೇ ಚಂದಾ ನವೀಕರಿಸುವವರಿಗೆ ಮಾತ್ರ ಪತ್ರಿಕೆ ಕಳುಹಿಸಲಾಗುವುದು.

**–ಸಂಪಾದಕ ಮಂಡಳಿ**

*ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ:*

**ಶೀತಲ ಭಟ್ 7411529355**

E-mail: nammamanasa@gmail.com



# ಹೊಲೆದು ಹೊಲೆದು ಚಿಂದಿಯಾದ ಬದುಕು

■ ದು. ಸರಸ್ವತಿ

"ನನ್ನ ಹೆಸರು ಕಮಲಮ್ಮ ನಮ್ಮದು ಸ್ವಂತ ಊರು ಮಳವಳ್ಳಿ (ತಾ), ಮಂಡ್ಯ (ಜಿ), ಈಗ ಇರುವುದು ಬ್ಯಾಟರಾಯನಪುರ ಬೆಂಗಳೂರಿನಲ್ಲಿ, ನನ್ನ ವಯಸ್ಸು 38 ವರ್ಷ, ನಾನು ಗಾರ್ಮೆಂಟ್ ಸೇರಿಕೊಂಡು 12 ವರ್ಷವಾಯಿತು. ನನಗೆ 2 ಮಕ್ಕಳು ಒಬ್ಬ ಮಗ ಓದುತ್ತಿದ್ದಾನೆ, ಇನ್ನೊಬ್ಬ ಮಗ ಹುಷಾರಿಲ್ಲದ ಕಾರಣ ಊರಿನಲ್ಲಿದ್ದಾನೆ. ಬೆಳಗ್ಗೆ 5.30ಕ್ಕೆ ಎದ್ದು, ಅಡುಗೆ ಮಾಡಿ, ಪಾತ್ರೆ ತೊಳೆದು, ನಮ್ಮ ಮನೆಯವರಿಗೆ ಮತ್ತು ಮಗನಿಗೆ ಬಾಕ್ಸ್ ರೆಡಿಮಾಡಿ ನಾನು ರೆಡಿ ಆಗಿ 8.30ಕ್ಕೆ ನಡೆದುಕೊಂಡು ಹೊರಟರೆ 9 ಗಂಟೆಗೆ ಕಂಪನಿ ತಲುಪುತ್ತೇನೆ. ಸಂಜೆ 05.35ಕ್ಕೆ ಬಿಡುತ್ತಾರೆ, ಓ.ಟಿ ಇದ್ದರೆ, 7.00 ಗಂಟೆಗೆ ಬಿಡುತ್ತಾರೆ, ಅಲ್ಲಿಂದ ಬಂದು ರಾತ್ರಿ ಊಟಕ್ಕೆ ರೆಡಿ ಮಾಡಿ, ಪಾತ್ರೆ ತೊಳೆದು, ಬಟ್ಟೆ ತೊಳೆದು ನೀರು ಹಿಡಿದು ಮಲಗಲು 11.00 ಗಂಟೆ ಆಗುತ್ತದೆ.

ಕಂಪನಿಗೆ 5 ನಿಮಿಷ ತಡವಾದರು ಲೇಟ್ ಕಮ್ಮಿಂಗ್ ಅಂತ ಹೇಳಿ ಪಂಚಿಗ್ ಕಾರ್ಡ್ ತೆಗೆದುಕೊಂಡು, ಸಂಜೆ ಮನೆಗೆ ಕಳುಹಿಸಲು ಲೇಟ್ ಮಾಡುತ್ತಾರೆ. 9 ಗಂಟೆಗೆ ಕೆಲಸಕ್ಕೆ ಹೋಗಿ ಕುಳಿತರೆ ಮಧ್ಯಾಹ್ನವೇ ಏಳುವುದು. ಊಟಕ್ಕೆಂದು ಅರ್ಧ ಗಂಟೆ ಇದ್ದರು 10 ನಿಮಿಷದಲ್ಲಿ ಮಾಡಿ ಬಂದು ಪ್ರೊಡಕ್ಷನ್ ಮಾಡುತ್ತೇವೆ, ಕೆಲವು ಸಲ ಊಟಕ್ಕೂ ಹೋಗಲು ಆಗುವುದಿಲ್ಲ, 1 ಗಂಟೆ ಏನಾದರು ಪ್ರೊಡಕ್ಷನ್ ಕಡಿಮೆ ಆದರೆ ಸೂಪರ್‌ವೈಸರ್ ಬಂದು ಮಿಷಿನ್ ಆಫ್ ಮಾಡಿ ಫ್ಲೋರ್ ಇಂಚಾರ್ಜ್. ಪಿ.ಎಮ್. ಹತ್ತಿರ ಕರೆದುಕೊಂಡು ಹೋಗಿ ಬೈಯಿಸುತ್ತಾರೆ. 'ಬೇರೆ ಕಡೆ ಕೆಲಸ ಮಾಡಲು ಯೋಗ್ಯತೆ ಇಲ್ಲ ಅದಕ್ಕೆ ಇಲ್ಲೆ ಬಂದು ಸಾಯುತ್ತವೆ' ಎಂದೆಲ್ಲ ಕೆಟ್ಟದಾಗಿ ಬಯ್ದು ಸಂಜೆ 6.00 – 6.30ರ ವರೆಗೂ ಓ.ಟಿ. ಮಾಡಿಸುತ್ತಾರೆ. ಹೀಗೆಲ್ಲ ಬಯ್ಯಿಸಿಕೊಳ್ಳುವ ನಮಗೆ ಮನೆಗೆ ಹೋದರೂ ನೆಮ್ಮದಿ ಇರುವುದಿಲ್ಲ, ಕೆಲಸದ ಬಗ್ಗೆಯೇ ಯೋಚಿಸುವುದರಿಂದ ನೆಮ್ಮದಿಯಾಗಿ ಊಟ ಮಾಡಲು ಆಗುವುದಿಲ್ಲ. ಬರುವ ಸಂಬಳವಂತೂ ಸಾಕಾಗುವುದಿಲ್ಲ, ಹಾಲು, ಮೊಟ್ಟೆ, ಮಾಂಸವನ್ನು ತಿಂಗಳಿಗೆ ಒಂದು ಸಲವು ತಿನ್ನಲು ಆಗುವುದಿಲ್ಲ. ಕಂಪನಿಯಲ್ಲಿ ಕೆಲಸ ಮಾಡಿ ನಮಗೆ ಮನೆಯಲ್ಲೂ ಕೆಲಸ ಮಾಡಲು ಆಗುವುದಿಲ್ಲ, ಯಾವಾಗಲೂ ಬೆನ್ನು ನೋವು, ಕುತ್ತಿಗೆ ನೋವು ತುಂಬಾನೆ ಬರುತ್ತೆ. ತಿಂಗಳ ಸಮಯದಲ್ಲಿ ತುಂಬಾನೆ ತೊಂದರೆ ಆಗುತ್ತದೆ."

● "ನನ್ನ ಹೆಸರು ಸಾಕಮ್ಮ, ನಮ್ಮದು ಸ್ವತಃ ಕನಕಪುರ, ನನಗೆ 42 ವರ್ಷ ವಯಸ್ಸು, ನಾನು ಕೆಲಸಕ್ಕೆ ಹೋಗಲು ಶುರು ಮಾಡಿ 25 ವರ್ಷವಾಯಿತು, ನನಗೆ 2 ಮಕ್ಕಳು, ಮನೆ ಬಾಡಿಗೆ 1700 ರೂ. ನಮ್ಮ ಮನೆಯಲ್ಲಿ ದುಡಿಯುವವಳು ನಾನೊಬ್ಬಳೆ. ಬೆಳಗ್ಗೆ 5.30ಕ್ಕೆ ಎದ್ದು ಅಡುಗೆ ಮಾಡಿ, ನೀರು ಹಿಡಿದು, ಪಾತ್ರೆ ತೊಳೆದು, ಪೂಜೆ ಮಾಡಿ ರೆಡಿ ಆಗಿ 8.15ಕ್ಕೆ ಮನೆ ಬಿಟ್ಟರೆ ಬಸ್ ಹಿಡಿದು 9.00 ಗಂಟೆಗೆ ಫ್ಯಾಕ್ಟರಿ ತಲುಪುತ್ತೇನೆ. ಸಂಜೆ 5.30ಕ್ಕೆ ಕೆಲಸ ಮುಗಿಸಿ ಮನೆ ಕೆಲಸ ಮಾಡಲು ಹೋಗುತ್ತೇನೆ. ರಾತ್ರಿ ಮನೆಗೆ ಹೋಗಲು 10.00 ಗಂಟೆ ಆಗುತ್ತದೆ, ಮತ್ತೆ ಮನೆ ಕೆಲಸ. ನನ್ನ ಮಗನಿಗೆ ಹುಷಾರಿಲ್ಲ. ಕಷ್ಟವಾದರೂ ಕೆಲಸವನ್ನು ಮಾಡಲೇಬೇಕು.

ಒಂದು ದಿನ 80 ಪೀಸ್ ಇದ್ದರೆ ಮುಂದಿನ ವಾರಕ್ಕೆ 100 ನಂತರ 120, 150, 160 ಹೀಗೆ ಪ್ರೊಡಕ್ಷನ್ ಹೆಚ್ಚಾಗುತ್ತದೆ. ಇದರಿಂದಾಗಿ ನೀರು ಕುಡಿದರೆ ಆಗಾಗ್ಗೆ ಟಾಯ್ಲೆಟ್‌ಗೆ ಹೋಗಬೇಕಾಗುತ್ತದೆ ಎಂದು ನಾವು ನೀರನ್ನು ಕುಡಿಯುವುದಿಲ್ಲ. ಊಟಕ್ಕೆಂದು ಇರುವ 30 ನಿಮಿಷದಲ್ಲಿ 10 ನಿಮಿಷ ಊಟ ಮಾಡಿ 20 ನಿಮಿಷ ಕೆಲಸ ಮಾಡುತ್ತೇವೆ. ಪ್ರೊಡಕ್ಷನ್ ಕೊಡಲು ಆಗದಿದ್ದರೆ ಕೆಲಸ ಮಾಡಲು ಯೋಗ್ಯತೆ ಇಲ್ಲ ಎಂದು ಪೀಸ್ ಕಿತ್ತುಕೊಂಡು ಮಿಷಿನ್ ಆಫ್ ಮಾಡಿ ಪೀಸ್ ಅನ್ನು ಮುಖದ ಮೇಲೆ ಎಸೆಯುತ್ತಾರೆ.

ಒಂದು ದಿನ ರಜೆ ಹಾಕಿದರೂ ಪಿ.ಎಂ. ಇಲ್ಲವೇ ಫ್ಲೋರ್ ಇಂಚಾರ್ಜ್ ಬರುವವರೆಗೂ ಗೇಟ್ ಹತ್ತಿರ ನಿಲ್ಲಿಸಿ, ಅಪಾಲಜಿ ಲೆಟರ್ ಬರೆಸಿಕೊಳ್ಳುತ್ತಾರೆ, ಬೇರೆ ಕೆಲಸ ಕೊಟ್ಟು ಪ್ರೊಡಕ್ಷನ್ ಕೇಳುತ್ತಾರೆ. ಪ್ರೊಡಕ್ಷನ್ ಕೊಡಲು ಆಗದಿದ್ದರೆ ಎಲ್ಲರ ಹತ್ತಿರ ಕರೆದುಕೊಂಡು ಹೋಗಿ ಬೈಯಿಸುತ್ತಾರೆ. ಕತ್ತೆ, ಗೂಬೆ ಹೊಟ್ಟೆಗೆ ಏನು ತಿನ್ನುತ್ತೀರಾ ಎಂದು ಟೇಬಲ್ ಹತ್ತಿರ ನಿಲ್ಲಿಸಿ ಎಲ್ಲರ ಎದುರು ಹೀಯಾಳಿಸುತ್ತಾರೆ. ಭಾನುವಾರವೂ ಸಹ ಕೆಲಸ ಮಾಡಿಸಿಕೊಂಡು ಅವರಿಗೆ ಬೇಕಾದಾಗ ರಜೆ ಕೊಡುತ್ತಾರೆ,

ಒಂದು ದಿನವೂ ರಜೆ ಹಾಕದೆ ಹೋದರೆ ನಮಗೆ 4100 ರಿಂದ 4300 ರೂ ಸಂಬಳ ಬರುತ್ತದೆ, ಮನೆ ಬಾಡಿಗೆ, ಕರೆಂಟ್ ಬಿಲ್, ನೀರಿನ ಬಿಲ್, ದಿನಸಿ, ಮಕ್ಕಳ ಸ್ಕೂಲ್ ಫೀಸ್ ಬಸ್ ಚಾರ್ಜ್‌ಗೆ ಸಾಕಾಗುವುದಿಲ್ಲ, ಈ ಸಂಬಳದಲ್ಲಿ ನಮ್ಮ ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸ

ಕೊಡಿಸಲು ಆಗುತ್ತಿಲ್ಲ, ಒಳ್ಳೆಯ ಬಟ್ಟೆ, ಊಟವೂ ಸಾಧ್ಯವಾಗುವುದಿಲ್ಲ. ಹುಷಾರಿಲ್ಲ ಎಂದರೆ 500 ರೂ.ಗಳ ವರೆಗೂ ಆಸ್ಪತ್ರೆಗೆ ಆಗುತ್ತದೆ, ಅದಕ್ಕೆ ನಾವುಗಳು ಕೆಲಸದಿಂದ ಬಂದು ಬೇರೆ ಮನೆಗೆಲಸ, ಹಪ್ಪಳ ಮಾಡುವುದು, ಬಟ್ಟೆ ಹೊಲೆಯುವುದು, ಹೂವು ಕಟ್ಟುವುದು, ಸಂಜೆ ಬೇರೆ ಮಕ್ಕಳನ್ನು ನೋಡಿಕೊಳ್ಳುವುದು, ಬತ್ತಿ ಹೊಸೆಯುವುದು, ಬೀಡಿ ಸುತ್ತುವುದು ಮಾಡುತ್ತೇವೆ. ಎಕ್ಸ್‌ಟ್ರಾ ಕೆಲಸ ಮಾಡಿ, ಮನೆಯಲ್ಲೂ ಕೆಲಸ ಮಾಡಿ, ಕಂಪನಿಯಲ್ಲೂ ಮಾಡುವುದರಿಂದ ಆರೋಗ್ಯದ ಸಮಸ್ಯೆ ತುಂಬಾನೇ ಇದೆ. ಹಾರ್ಟ್ ಪ್ರಾಬ್ಲಂ, ಗರ್ಭಕೋಶದ ತೊಂದರೆ, ಪೈಲ್ಸ್, ಆಸ್ತಮಾ, ಕಿಡ್ನಿ ಪ್ರಾಬ್ಲಂ, ನರಗಳ ತೊಂದರೆ, ಮೂಳೆಗಳ ಕಾಯಿಲೆಗಳು ಸಾಮಾನ್ಯ. ಒಳ್ಳೆಯ ಜೀವನ ಇಲ್ಲ, ಕಷ್ಟದಲ್ಲೇ ಹುಟ್ಟಿ ಕಷ್ಟದಲ್ಲೇ ಬೆಂದು ಸಾಯುತ್ತೇವೆ. ಸಂಬಳ ಸಾಕಾಗದೆ ಪ್ರತಿ ತಿಂಗಳು ಸಾಲದಲ್ಲಿ ಬೀಳುತ್ತೇವೆ. ಈ ಸಮಸ್ಯೆಗಳಿಗೆ ಪರಿಹಾರವೇ ಇಲ್ಲವೇ?"

ಹೀಗೆ ಸಾಗಿದ್ದವು ಬವಣೆಯ ಕತೆಗಳು.... ಗಾರ್ಮೆಂಟ್ಸ್ ಕಾರ್ಮಿಕರಿಗೆ ಬದುಕುವ ವೇತನ ಹಾಗೂ ಉತ್ತಮ ಕೆಲಸದ ವಾತಾವರಣಕ್ಕಾಗಿ ನಡೆದ ರಾಷ್ಟ್ರಮಟ್ಟದ ನ್ಯಾಯಾಧೀಕರಣದಲ್ಲಿ. ಅಮೇರಿಕ, ಯುರೋಪ್, ಆಸ್ಟ್ರೇಲಿಯಾ ಹೀಗೆ ಜಗತ್ತಿನಾದ್ಯಂತ ಮಾರಾಟವಾಗುವ ಅತ್ಯಾಧುನಿಕ ಉಡುಪುಗಳನ್ನು ಗ್ಯಾಪ್ (Gap), ನೈಕಿ(Nike), ವಾಲ್ಮಾರ್ಟ್(Walmart), ಲೀ(Lee), ಲೀವೈಸ್ (Levis), ಆರೋ (Arrow), ಯು.ಎಸ್.ಪೋಲೋ (U.S.Polo) ಪೀಟರ್ ಇಂಗ್ಲೆಂಡ್‌ನಂತಹ ಜಗದ್ವಿಖ್ಯಾತ ಬ್ರ್ಯಾಂಡುಗಳಿಗಾಗಿ ಸಿದ್ಧಪಡಿಸುವವರು ಕೆಂಚೇನಹಳ್ಳಿ, ಆವಲಹಳ್ಳಿ, ನಾಯಂಡಹಳ್ಳಿ, ಅರ್ಚಕರ ಹಳ್ಳಿ, ಬನ್ನಿಕುಪ್ಪೆ, ಶ್ರೀನಗರ, ಬ್ಯಾಟರಾಯನಪುರಗಳಲ್ಲಿ ವಾಸವಾಗಿರುವ ಸೌಮ್ಯ, ರತ್ನಮ್ಮ, ಮದೀನ, ಜಯಮ್ಮ, ಶೋಭಾಳಂತಹ ಮಹಿಳೆಯರು. ಇವರು ಕೆಲಸ ಮಾಡುತ್ತಿರುವುದು, ಸಿದ್ಧ ಉಡುಪು ತಯಾರಿಸುವ ಗೋಕುಲ್‌ದಾಸ್ ಎಕ್ಸ್‌ಪೋರ್ಟ್ಸ್, ಬಾಂಬೆರೇಯಾನ್ ಫ್ಯಾಷನ್ಸ್, ಟೆಕ್ಸ್‌ಪೋರ್ಟ್ಸ್ ಕ್ರಿಯೇಶನ್ಸ್, ಶಾಹಿ ಎಕ್ಸ್‌ಪೋರ್ಟ್ಸ್‌ನಂತಹ ಪ್ರಮುಖ ಕಂಪನಿಗಳಲ್ಲಿ. ಇಂತಹವು ಬೆಂಗಳೂರಿನ ಮೈಸೂರು ರಸ್ತೆಯಲ್ಲಿಯೇ ಹಲವಾರು ಇವೆ.



ನಮ್ಮ ನಾಡಿನಲ್ಲಿ ಬೆಳೆದ ಹತ್ತಿ, ನಮ್ಮದೇ ವಿದ್ಯುತ್, ನೀರು, ಬಡಮಹಿಳೆಯರ ಅಗ್ಗದ ದುಡಿಮೆ ಬಳಸಿಕೊಂಡು ತಯಾರಾಗುವ ಉಡುಪುಗಳ– ತೊಟ್ಟು, ನೀಡುವ ಕೆಲವೇ ಕ್ಷಣಗಳ ಪೋಸಿಗೆ ಫ್ಯಾಷನ್ ಐಕಾನ್‌ಗಳು ಗಂಟೆಗೆ ಲಕ್ಷಾಂತರ ರೂಪಾಯಿಗಳನ್ನು ಎಣಿಸುತ್ತಾರೆ.

ಮಾರಾಟದಿಂದ ನಮ್ಮ ದೇಶಕ್ಕೆ ಸಿಗುವ ವಿದೇಶಿ ವಿನಿಮಯ ಒಂದು ಲಕ್ಷ ಕೋಟಿಗೂ ಅಧಿಕ. ಬೆಂಗಳೂರು ನಗರವೊಂದರಿಂದಲೇ ದೊರಕುವ ವಿದೇಶಿ ವಿನಿಮಯ ಹದಿನೈದು ಸಾವಿರ ಕೋಟಿಗಿಂತಲೂ ಹೆಚ್ಚು. ಉದ್ದಿಮೆಯ ಒಟ್ಟು ಆದಾಯದಲ್ಲಿ ಶೇ. 25ರಷ್ಟು ಸ್ಥಳೀಯ ಕಂಪನಿಗಳಿಗೆ ಸಿಕ್ಕರೆ ಅಂತರರಾಷ್ಟ್ರೀಯ ಬ್ರ್ಯಾಂಡುಗಳಿಗೆ ದೊರಕುವುದು ಶೇ75 ರಷ್ಟು!

ಬೆನ್ನು, ಕುತ್ತಿಗೆ ಬಗ್ಗಿಸಿ ಮೂಳೆ–ಕೀಲುಗಳ ಸವೆಸಿಕೊಂಡು ದಿನಕ್ಕೆ 8–10 ಗಂಟೆಗಳ ಕಾಲ ಹೊಲೆಯುವ ಮಹಿಳೆಯರಿಗೆ ಸಿಗುವ ಸಂಬಳ ಮಾತ್ರ ತಿಂಗಳಿಗೆ 4500–5000 ರೂಪಾಯಿ. ಎರಡು ಪ್ಯಾಂಟುಗಳಿಗಿಂತ ಕಡಿಮೆ!

ಅನ್ಯಾಯದ ಲಾಭ ದೋಚಲು ಸಾಧ್ಯವಾಗುವುದು ದುಡಿಯುವವರ ನ್ಯಾಯಯುತ ಹಕ್ಕುಗಳನ್ನು ದಮನಮಾಡಿದಾಗ ಮಾತ್ರ. ಹಾಗೆಯೇ ತಮ್ಮ ಹಕ್ಕುಗಳನ್ನು ಹತ್ತಿಕ್ಕಿದಾಗಲೆಲ್ಲ ಎಚ್ಚೆತ್ತು ಪ್ರತಿಭಟಿಸಿರುವವರು ದಮನಿತರೇ ಆಗಿದ್ದಾರೆ ಎಂಬುದು ಸಹ ಐತಿಹಾಸಿಕ ಸತ್ಯವೇ ಆಗಿದೆ. ಕಳೆದ 8 ವರ್ಷಗಳಿಂದ ಗಾರ್ಮೆಂಟ್ ಅಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್ ಹಾಗೂ ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆ ಎಂಬ ಸಾಮಾಜಿಕ ಸಂಘಟನೆಯ ಮೂಲಕ ತಮ್ಮ ಕಾನೂನು ಬದ್ಧ ಹಕ್ಕುಗಳಿಗಾಗಿ ಹೋರಾಡುತ್ತಿರುವ ಗಾರ್ಮೆಂಟ್ಸ್ ಮಹಿಳೆಯರು ಹೋರಾಟದ ಇತಿಹಾಸದಲ್ಲಿ ತಮ್ಮದೇ ಛಾಪು ಮೂಡಿಸಿದ್ದಾರೆ. ಬದುಕುವ ವೇತನ, ಕಿರುಕುಳಮುಕ್ತ ಆರೋಗ್ಯಕರ ಕೆಲಸದ ವಾತಾವರಣ, ನ್ಯಾಯಯುತ ಸೌಲಭ್ಯಗಳಿಗಾಗಿ ಕಾರ್ಮಿಕ ಸಂಘಟನೆಯ ಮೂಲಕ ಹೋರಾಟ ಮಾಡುತ್ತಿದ್ದಾರೆ. ಹಾಗೆಯೇ ಕೌಟುಂಬಿಕ ದೌರ್ಜನ್ಯ ಹಾಗೂ ಇತರೆ ಸಾಮಾಜಿಕ ಅನ್ಯಾಯಗಳ ವಿರುದ್ಧ ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆ ಸಾಮಾಜಿಕ ಸಂಘಟನೆಯ ಮೂಲಕ ಹೋರಾಡುತ್ತಿದ್ದಾರೆ. ಕಾರ್ಮಿಕರಿಗೆ ಅನ್ಯಾಯವಾದಾಗಲೆಲ್ಲ ಅವರೊಂದಿಗೆ ನಿಂತು ಸ್ಥೈರ್ಯ ತುಂಬುವುದರ ಜೊತೆಗೆ ಬಗೆಹರಿಸಿರುವ ಸಮಸ್ಯೆಗಳು ಹಲವು. ಇವರ ಕಾನೂನು ಬದ್ಧ ಹೋರಾಟವನ್ನು ಗುರುತಿಸಿ, ಕರ್ನಾಟಕ ಸರ್ಕಾರ ಇವರ ಕಾರ್ಮಿಕ ಸಂಘಟನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾಮಂಡಳಿಗೆ ನಾಮನಿರ್ದೇಶನ ಮಾಡಿದೆ. ಕಳೆದ ನವೆಂಬರ್ 22, 23 ಮತ್ತು 25ರಂದು ಬದುಕುವ ವೇತನ ಮತ್ತು ಉತ್ತಮ ಕೆಲಸದ ವಾತಾವರಣಕ್ಕಾಗಿ, ಬೆಂಗಳೂರಿನ ಇತರ ಯೂನಿಯನ್‌ಗಳು ಹಾಗೂ ಸಮಾನ ಮನಸ್ಕ ಸಂಘಟನೆಗಳ ಸಹಕಾರದೊಂದಿಗೆ ನಡೆಸಿಕೊಟ್ಟ ರಾಷ್ಟ್ರಮಟ್ಟದ ನ್ಯಾಯಾಧೀಕರಣವು, ಅವರ ಶಿಸ್ತು, ಬದ್ಧತೆ, ಸಂಘಟನಾ ಸಾಮರ್ಥ್ಯಕ್ಕೆ ಸಾಕ್ಷಿ.

ಈ ಮಹಿಳೆಯರು ತಮ್ಮ ಬದುಕಿನ ಬವಣೆ ಹೋರಾಟಗಳಲ್ಲೇ ಕಳೆದು ಹೋಗುವವರಲ್ಲ. ಅವರ ಹೋರಾಟಗಳಿಗಷ್ಟೇ ಅಲ್ಲದೆ ಅವರೊಳಗಿನ ಪ್ರತಿಭೆಗೂ

ಅಭಿವ್ಯಕ್ತಿಯಾಗಿರುವ, ಅವರೇ ಪ್ರಕಟಿಸುತ್ತಿರುವ 'ಸೂಜಿ-ದಾರ' ಎಂಬ ದ್ವೈಮಾಸಿಕ ಪತ್ರಿಕೆಯು ಕಾರ್ಮಿಕರ ನಡುವಿನ ಬಾಂಧವ್ಯದ ಬೆಸುಗೆಯಂತಿದೆ. ಮಕ್ಕಳಿಗಾಗಿ ಪುಟ್ಟದೊಂದು ಗ್ರಂಥಾಲಯವನ್ನು, ಕನ್ನಡ ಅಭಿವೃದ್ಧಿ ಪ್ರಾಧಿಕಾರದೊಂದಿಗೆ ಕಾರ್ಮಿಕರಿಗಾಗಿ ಕನ್ನಡ ತರಗತಿಗಳನ್ನು ನಡೆಸುತ್ತಿದ್ದಾರೆ.

ದುಡಿಯುವ ಸ್ಥಳದಲ್ಲಷ್ಟೇ ಅಲ್ಲ, ತಮ್ಮ ವೈಯಕ್ತಿಕ ಬದುಕಿನಲ್ಲೂ ಇವರು ಅನ್ಯಾಯದ ವಿರುದ್ಧ ಸಿಡಿದು ನಿಲ್ಲುವವರೆ ಆಗಿದ್ದಾರೆ.

"ಬುರ್ಖಾದಲ್ಲಿ ಮುಖ ಮುಚ್ಚಿಕೊಂಡು ಎಲ್ಲಾದ್ರು ಓಡಾಡಬೋದು. ನಾನು ಮಾಡೋದು ನ್ಯಾಯವಾದ ಕೆಲಸ. ಅದನ್ನ ಬುರ್ಖಾ ತೆಗೆದಿಟ್ಟೆ ಮಾಡ್‌ತೀನಿ" ಎಂದು ಬುರ್ಖಾ ಹಾಕುವುದನ್ನೆ ಬಿಟ್ಟು ಗಂಡನ ಸಂಶಯವನ್ನು ಪ್ರತಿಭಟಿಸಿದ ಮದೀನ.

"ಪಕ್ಷ ಮಾಡಿ ಗಂಡಂಗೆ ಎಡೆ ಮಾಡಕೆ ಅವನಿಗೆ ತುಂಬ ಇಷ್ಟ ಆಗೊ ರವೆಉಂಡೆ, ಚಕ್ಲಿ ಮಾತ್ರ ಮಾಡಲ್ಲ. ಅಷ್ಟು ಕೊಲೆ ಕೊಟ್ಟವ್ನೆ ಇರೋವಾಗ" ಅನ್ನೋ ನೇತ್ರಾ

"ಪೇಪರಲ್ಲಿ ಮಾತಾಡ್ದೆ ಅಂತ ಎಗ್ರಾಡ್ತರೆ. ಎನ್ಮಾಡ್ತರೆ ಮಾಡ್ಕಳ್ಲಿ ದುಡ್ದು ಉಣ್ಣದು ತಪ್ಪಿದ್ದಲ್ಲ" ಎನ್ನುವ ರತ್ನಮ್ಮ

ಮನೆಯೊಳಗೆ ಹತ್ತಿಕ್ಕುವ ಪುರುಷಾಧಿಪತ್ಯಕ್ಕೆ ತಿರುಗೇಟು ನೀಡುವ ಸಣ್ಣ ಝಲಕುಗಳಿವು. ಜಾಗತೀಕರಣದ ಹಿನ್ನೆಲೆಯಲ್ಲಿ ಲಾಭಕೋರ ಬಂಡವಾಳಶಾಹಿ ಮತ್ತು ದಮನಕಾರಿ ಪಿತೃಪ್ರಧಾನತೆಯು ಅಸಮಾನ ವ್ಯವಸ್ಥೆಯ ಲಾಭ ಪಡೆದುಕೊಂಡು ದಮನಿತರ ಹಸಿವನ್ನೆ ದೋಚಿ ಲಾಭವಾಗಿಸಿಕೊಳ್ಳುವುದನ್ನು ಗಾರ್ಮೆಂಟ್ಸ್ ಉದ್ದಿಮೆಯಲ್ಲಿ ಕಾಣಬಹುದು. ಕಲ್ಯಾಣಕಾರಿ ಕಾರ್ಯಕ್ರಮಗಳಿಂದ ಕಳಚಿಕೊಳ್ಳುತ್ತಿರುವ ಸರ್ಕಾರ, ಕೌಟುಂಬಿಕ ಜವಾಬ್ದಾರಿಗಳಿಂದ ತಪ್ಪಿಸಿಕೊಳ್ಳುವ ಗಂಡಸರು, ಕಿರುಕುಳದ ಸರಪಳಿ ಹಾಕಿಸಿ ಜೀತ ಮಾಡಿಸುವ ಕಾರ್ಖಾನೆಗಳು ತಳಜಾತಿ / ತಳವರ್ಗದ ಮಹಿಳೆಯರ ಬದುಕನ್ನ ದುಸ್ತರಗೊಳಿಸಿವೆ. ಬದುಕನ್ನು ಕಟ್ಟಿಕೊಳ್ಳಲೇಬೇಕಾದ ಅನಿವಾರ್ಯತೆ, ಬದುಕಲೇ ಬೇಕೆಂಬ ಛಲವೆ ಈ ಮಹಿಳೆಯರನ್ನು ಜೀವಂತವಾಗಿರಿಸಿದೆ. ಮನೆ ಹಾಗೂ ಹೊರ ಜಗತ್ತಿನ ದಮನಕಾರಿ ಅಸಮಾನ ವ್ಯವಸ್ಥೆಯನ್ನು ಎದುರಿಸಲು ಈ ಮಹಿಳೆಯರು ತಮ್ಮದೆ ಪ್ರತಿರೋಧದ ನೆಲೆಗಳನ್ನು ಕಂಡುಕೊಂಡಿದ್ದಾರೆ. ಇಂತಹ ಪ್ರತಿರೋಧದ ನೆಲೆಗಳನ್ನು ಹಾಗೂ ದುಡಿಮೆಯ ಬದುಕಿನೊಂದಿಗೆ ಕಟ್ಟಿಕೊಂಡಿರುವ ವಿವೇಕ, ದರ್ಶನವನ್ನು ಗುರುತಿಸಿ ಒಳಗೊಳ್ಳುವ ಮೂಲಕ ಮಹಿಳಾ ಚಳುವಳಿ ತನ್ನ ನೋಟವನ್ನೆ ವಿಸ್ತರಿಸಿಕೊಳ್ಳಬಹುದೆಂಬುದರಲ್ಲಿ ಸಂಶಯವೆ ಇಲ್ಲ. ಅಲ್ಲದೆ ಮಹಿಳೆಯರ ಸೃಜನಶೀಲ ಅಭಿವ್ಯಕ್ತಿ ಹಾಗೂ ಕ್ರಿಯಾಶೀಲ ಪ್ರತಿರೋಧವು ಸಹ ಹೊಸ ಆಯಾಮವನ್ನೆ ಪಡೆದುಕೊಳ್ಳಬಹುದು. ಈ ಮಹಿಳೆಯರ ಬದುಕಿನೊಳಗೆ ಖಂಡಕಾವ್ಯಗಳು, ಮಹಾಕಾವ್ಯಗಳು ಅಡಗಿಕೊಂಡಿವೆ. ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆಯ ಇ.ಸಿ. ಸದಸ್ಯೆಯಾಗಿರುವ ನೇತ್ರಾ ಬರೆದಿರುವ ಈ ಪದ್ಯ ದುಡಿದುಣ್ಣುವ ಹೆಣ್ಣು ಎಚ್ಚೆತ್ತರೆ ಹಚ್ಚಬಲ್ಲ ಬೆಳಕಿನ ಕಿರಣದಂತಿದೆ–

*"ಗಾರ್ಮೆಂಟ್ಸ್ ಕಾರ್ಮಿಕರು*
*ಸಣ್ಣ ಹಣತೆಯ ಕುಡಿಗಳು*
*ನೋವಿನಲ್ಲು ಕೂಡ*
*ಉರಿಯುವ ಸೂರ್ಯನ ಮರಿಗಳು*
*ಒಟ್ಟಾಗಿ ನಿಂತರೆ*
*ದಟ್ಟ ಕತ್ತಲೆಯನ್ನೆ ಅಟ್ಟುವ ಕಲಿಗಳು"* ❑

# ಅಲ್ಲಿ – ಇಲ್ಲಿ

ನನಗೂ ಕಲಿಯಲು ಆಸೆ ಇದೆ
ಇಲ್ಲಿಯಾದರೂ ಅಲ್ಲಿ
ಅಲ್ಲಿಯಾದರೂ ಇಲ್ಲಿ
ಎಲ್ಲಾದರೂ ಒಂದಲ್ಲಿ
ನಾನು ಕಲಿಯಬೇಕು
ಮುಂದುವರೆಯಬೇಕು ಬೇಕು
ಹೆಣ್ಣಾದರೆ ಏನಾಯಿತು?
ನನಗೂ ಆಸೆ ಇದೆ, ಆಕಾಂಕ್ಷೆ ಇದೆ,
ಕಲಿಯಲು ಮನಸ್ಸಿದೆ,
ಯಾಕೆ ಈ ಸಾಮಾಜಿಕ ಕಟ್ಟಳೆಗಳು
ನನಗೆ ಅಕ್ಷರರಾಗಲು ಬಿಡುತ್ತಿಲ್ಲ
ಬೆಳೆಯಲು ಕೊಡುತ್ತಿಲ್ಲ ಅಲ್ಲಿ-ಇಲ್ಲಿ
ನಾನು ಕಲಿಯಬೇಕು
ನನಗೂ ಕಲಿಯಲೂ ಆಸೆ ಇದೆ
ಇಲ್ಲಿಯಾದರೂ ಅಲ್ಲಿ
ಅಲ್ಲಿಯಾದರೂ ಇಲ್ಲಿ

■ ರಜಿಯಾ. ಎ.ಎನ್.

# ಮಹಿಳೆ ಮತ್ತು ಕಾನೂನು

■ ಪ್ರೀತಿ ರಂಗನಾಥ್



## ಚುಡಾಯಿಸುವುದು ಪುರುಷರ ಹಕ್ಕಲ್ಲ

ದಿನಾಂಕ 15.03.2013ರಂದು ದಿನ ಪತ್ರಿಕೆಯಲ್ಲಿ, ಹೆಣ್ಣುಮಕ್ಕಳನ್ನು ರೇಗಿಸುತ್ತಿದ್ದ ಪುಂಡರ ಚಿತ್ರವನ್ನು ಸೆರೆ ಹಿಡಿದು ಅದನ್ನು ಫೇಸ್ ಬುಕ್ಕಿನಲ್ಲಿ ಹಾಕಿ ಆ ಪುಂಡರನ್ನು ಹಿಡಿದು ದಂಡ ಕಟ್ಟಿಸಿದ ಪ್ರಕರಣ ಎರಡು ಯೋಚನೆಗಳನ್ನು ಹುಟ್ಟು ಹಾಕಿತು. ಒಂದು ಆ ಚಿತ್ರ ಸೆರೆ ಹಿಡಿದು ಪ್ರಚಾರ ಮಾಡಿ ಅವರಿಗೆ ಶಿಕ್ಷೆ ನೀಡಿದ ರೀತಿಯ ಕುರಿತು ಮೆಚ್ಚುಗೆ, ಇನ್ನೊಂದು ಅವರಿಗೆ ಶಿಕ್ಷೆ ನೀಡಿದ ಪ್ರಮಾಣ ಹಾಸ್ಯಾಸ್ಪದವಾಗಿದ್ದರ ಬಗ್ಗೆ. ಕೆಲ ದಿನಗಳ ಹಿಂದೆ ನನ್ನ ಕಕ್ಷಿದಾರರೊಬ್ಬರ ಜೊತೆ ಅವರ ಕೌಟುಂಬಿಕ ವಿಚಾರಕ್ಕೆ ಸಂಬಂಧಿಸಿದಂತೆ ಪೊಲೀಸ್ ಠಾಣೆಯಲ್ಲಿ ದೂರು ನೀಡಲು ಹೋಗಿದ್ದಾಗ ಸುಮ್ಮನೆ ಚುಡಾಯಿಸುವುದರ ವಿಚಾರದ ಬಗ್ಗೆ ವಿಚಾರಿಸಿದೆ. ಆ ಠಾಣೆಯ ಎ.ಎಸ್.ಐ. ಬಹಳ ಹಗುರವಾಗಿ 'ಏನ್ ಮೇಡಂ ರೇಗಿಸಿದ ಪ್ರಕರಣ ದಾಖಲಿಸಿದ್ರೆ ಏನಾಗುತ್ತೆ ಮಹಾ, ಹೇಳಿ ಹೆಚ್ಚೆಂದರೆ 200ರೂ. ದಂಡ ಅಷ್ಟೇ' ಎಂದು ಹೇಳಿದ್ದು ನೆನಪಾಯಿತು. ಅವರಿಗೆ ಚುಡಾಯಿಸುವುದು ಎನ್ನುವುದು ಒಂದು ಹಿಂಸೆಯ, ದೌರ್ಜನ್ಯದ ವಿಚಾರವೆನ್ನಿಸುವುದೇ ಇಲ್ಲ.

ಇವತ್ತು ಮಹಿಳೆಯರು ಅನುಭವಿಸುತ್ತಿರುವ ಹಲವಾರು ಹಿಂಸೆಗಳಲ್ಲಿ ಯಾವುದೇ ಜಾತಿ, ಧರ್ಮ, ವಯಸ್ಸಿನ ಭೇದವಿಲ್ಲದೆ ಚುಡಾಯಿಸುವ ಭೂತಕ್ಕೆ ಬಲಿಯಾಗುತ್ತಿರುವುದು ಅತಿ ಹೆಚ್ಚು. ಜೊತೆಗೆ ಈ ಚುಡಾಯಿಸುವ ವಿಚಾರ ಆಗಿರುವಷ್ಟು ಹಗುರ ಮತ್ತೆ ಯಾವ ವಿಷಯವು ಆಗಿಲ್ಲವೆಂದರೆ ಉತ್ಪ್ರೇಕ್ಷೆಯಲ್ಲ. ಏಕೆಂದರೆ ಠಾಣೆಗಳಲ್ಲಿ ವಿಚಾರಿಸಿದರೆ ಇಂತಹ ಪ್ರಕರಣಗಳು ಬರುವುದೇ ಇಲ್ಲ ಎಂದು ತಿಳಿಸುತ್ತಾರೆ. ಮೊದಲನೆಯದಾಗಿ ಮಹಿಳೆಯರಿಗೆ ಈ ವಿಚಾರ ಠಾಣೆಯವರೆಗೂ ಕೊಂಡೊಯ್ಯಬಹುದು. ಅದು ನನ್ನ ಮೇಲೆ ನಡೆಯುತ್ತಿರುವ ಒಂದು ಹಿಂಸೆ ಎನ್ನುವ ಅರಿವು ಮೂಡದೆ ಇರುವಷ್ಟು ಹಗುರವಾದ ವಿಚಾರವಾಗಿಬಿಟ್ಟಿದೆ. ಇನ್ನು ಕುಟಂಬದಲ್ಲಿಯೂ ಹೆಣ್ಣುಮಕ್ಕಳಿಗೆ ಕಟ್ಟುನಿಟ್ಟಿನ ಎಚ್ಚರಿಕೆ ನೀಡಿಯೇ ಮನೆಯಿಂದ ಹೊರಗೆ ಕಳುಹಿಸಲಾಗುತ್ತದೆ. ಆ ಎಚ್ಚರಿಕೆ 'ಸುಮ್ಮನೆ ಇದ್ದುಬಿಡು' ಎನ್ನುವುದು.

ಸಮಾಜದಲ್ಲಿ ಯಾವುದೇ ಒಂದು ಸಮಸ್ಯೆ ಗಂಭೀರ ಸ್ವರೂಪ ಪಡೆಯಬೇಕಾದ್ದಲ್ಲಿ ಅದಕ್ಕೆ ಸಮಾಜದಲ್ಲಿ ಸಿಗುವ ಪ್ರಾಮುಖ್ಯತೆ ಬಹಳ ಮುಖ್ಯ ಪಾತ್ರವಹಿಸುತ್ತದೆ. ಸಮಾಜದಲ್ಲಿ ಸಮಸ್ಯೆಯ ಬಗ್ಗೆ ಹಗುರ ಭಾವನೆ ಅಥವಾ ನಿರ್ಲಕ್ಷ್ಯಕ್ಕೆ ಒಳಪಟ್ಟರೆ ಅದರ ಪರಿಣಾಮದ ಬಗ್ಗೆ ಯೋಚಿಸುವುದು ಗೌಣವಾಗುತ್ತದೆ. ಹಾಗಾಗಿಯೇ ಇಂದು ಚುಡಾಯಿಸುವ ವಿಚಾರವು ಬಹಳ ಹಗುರವಾದ ಮತ್ತು ಸಾಮಾನ್ಯ ವಿಚಾರವಾಗಿಬಿಟ್ಟಿದೆ. ಪುರುಷರಿಗೆ ಚುಡಾಯಿಸಿವುದು ಒಂದು ಅಹಂ ಮತ್ತು ಹವ್ಯಾಸದ ವಿಚಾರವಾಗಿಬಿಟ್ಟಿದೆ ಮತ್ತು ಹೆಣ್ಣುಮಕ್ಕಳಿಗೆ ಇದನ್ನು ಸಹಿಸುವ ಹವ್ಯಾಸವಾಗಿಬಿಟ್ಟಿದೆ. ಸಿನಿಮಾ ಮತ್ತು ಮುಂತಾದ ಮಾಧ್ಯಮಗಳಿಗೆ ಮಹಿಳೆಯನ್ನು ಚುಡಾಯಿಸುವುದು ಮನರಂಜನೆಯ ಪ್ರಮುಖ ಅಂಶ. ಒಬ್ಬಂಟಿಯಾಗಿ ಅಥವಾ ಗುಂಪಿನಲ್ಲಿ ಬರುತ್ತಿರುವ ಹೆಣ್ಣುಮಕ್ಕಳನ್ನು ಬಾಯಿಗೆ ಬರುವಂತಹ ಅಸಹ್ಯ ಮಾತಾಡುವುದು, ಆಕಸ್ಮಿಕವಾಗಿ ಅವರ ಮುಖ ನೋಡಿದರೆ ಅಸಹ್ಯ ಸನ್ನೆ ಮಾಡುವುದು, ಕೆಟ್ಟ ದ್ವಂದ್ವಾರ್ಥ ಹಾಡುಗಳನ್ನು ಹಾಡುವುದು, ಹತ್ತಿರಕ್ಕೆ ಬಂದು ಮೈ ತಾಕಿಸುವುದು, ಜನನಿಬಿಡ ಪ್ರದೇಶಗಳಲ್ಲಿ, ಬಸ್ಸು ಹತ್ತುವಾಗ ಚಿವುಟುವುದು. ಓಹ್! ಹೇಳುತ್ತಿದ್ದರೆ ಪುಟಗಟ್ಟಲೆ ಬರೆಯಬಹುದು. ಹಾಗಾಗಿಯೆ ಚುಡಾಯಿಸುವುದರ ಪದದ ಅರ್ಥ ಹುಡುಕುವುದು ಬಹಳ ಕಷ್ಟ. ಈ ಹಿಂಸೆಗೆ ತುತ್ತಾದ ಯುವತಿಯರು ತಮ್ಮ ಜೀವಕ್ಕೆ ಆಪತ್ತು ತಂದುಕೊಂಡಿರುವ ಉದಾಹರಣೆಗಳು ಇವೆ.

ನಮ್ಮ ಕಾನೂನು ಕೂಡ ಚುಡಾಯಿಸುವುದೆಂದರೇನು ಎನ್ನುವುದನ್ನು ಸರಿಯಾಗಿ ತಿಳಿಸುವುದಿಲ್ಲ. ಈ ವಿಚಾರಕ್ಕೆ ಸಂಬಂಧಿಸಿದಂತೆ ಇಡೀ ದೇಶದಲ್ಲಿ, ತಮಿಳುನಾಡು ಹೊರತು ಪಡಿಸಿ, ಎಲ್ಲಿಯೂ ಪ್ರತ್ಯೇಕ ಕಾನೂನು ಇರುವುದಿಲ್ಲ. ಇದೊಂದು ದುರಂತವೇ ಸರಿ. ತಮಿಳುನಾಡಿನಲ್ಲಿ ಮಾತ್ರ 1998ರಲ್ಲಿ ಈ ವಿಚಾರಕ್ಕೆ ಪ್ರತ್ಯೇಕ ಕಾಯಿದೆಯನ್ನು ಮಾಡಲಾಗಿದೆ. ಹಾಗಾಗಿ ಈ ವಿಚಾರವನ್ನು ಭಾರತೀಯ ದಂಡ ಸಂಹಿತೆ ಕಲಂ 294 ಮತ್ತು 509ರಡಿ ಕ್ರಮವನ್ನು ತೆಗೆದುಕೊಳ್ಳಲಾಗುತ್ತದೆ. ಇನ್ನು ಮಹಿಳೆಯ ಮೇಲೆ ದೈಹಿಕ ಹಲ್ಲೆ ನಡೆದಿದ್ದರೆ ಕಲಂ 354ರಡಿ ಪ್ರಕರಣ ದಾಖಲಿಸಲಾಗುತ್ತದೆ. ಇವುಗಳು ಈ ಕೆಳಗಿನಂತಿವೆ:

*ಕಲಂ 294: ಅಶ್ಲೀಲ ಕೃತ್ಯಗಳು ಮತ್ತು ಹಾಡುಗಳು*

*ಯಾವನೇ ವ್ಯಕ್ತಿಯೂ, ಇನ್ನೊಬ್ಬನಿಗೆ ಕಿರುಕುಳ ಉಂಟಾಗುವ ಹಾಗೆ;*

ಅ) ಸಾರ್ವಜನಿಕ ಸ್ಥಳದಲ್ಲಿ ಅಶ್ಲೀಲ ಕೃತ್ಯವನ್ನು ಮಾಡಿದರೆ, ಅಥವಾ

ಆ) ಯಾವುದೇ ಸಾರ್ವಜನಿಕ ಸ್ಥಳದಲ್ಲಿ ಅಥವಾ ಅದರ ಸಮೀಪ ಯಾವುದೇ ಅಶ್ಲೀಲ ಹಾಡುಗಳನ್ನು, ಲಾವಣಿಗಳನ್ನು ಅಥವಾ ಪದಗಳನ್ನು ಹಾಡಿದರೆ ಅಥವಾ ಉಚ್ಚರಿಸಿದರೆ,

ಅವನು ಮೂರು ತಿಂಗಳವರೆಗಿನ ಅವಧಿಯ ಎರಡರಲ್ಲೊಂದು ಬಗೆಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕುದು.

**ಕಲಂ 509:** ಒಬ್ಬ ಮಹಿಳೆಯ ಮಾನಕ್ಕೆ ಕುಂದುಂಟು ಮಾಡುವ ಉದ್ದೇಶವಿರುವ ಶಬ್ದ, ಸಂಜ್ಞೆ ಅಥವಾ ಕೃತ್ಯ.

ಒಬ್ಬ ಮಹಿಳೆಯ ಮಾನಕ್ಕೆ ಕುಂದುಂಟು ಮಾಡುವ ಉದ್ದೇಶದಿಂದ ಯಾವುದೇ ಪದವನ್ನು ಉಚ್ಚರಿಸುವ, ಯಾವುದೇ ಧ್ವನಿಯನ್ನು ಅಥವಾ ಸಂಜ್ಞೆಯನ್ನು ಮಾಡುವ ಅಥವಾ ವಸ್ತುವನ್ನು ಕೇಳಬೇಕು ಅಥವಾ ಅಂಥ ಸಂಜ್ಞೆ ಅಥವಾ ವಸ್ತುವನ್ನು ನೋಡಬೇಕು ಎಂಬ ಉದ್ದೇಶದಿಂದ ಹಾಗೆ ಮಾಡುವ ಅಥವಾ ಅಂಥ ಮಹಿಳೆಯೂ ಏಕಾಂತದಲ್ಲಿರುವಾಗ ಅಲ್ಲಿ ಅಕ್ರಮ ಪ್ರವೇಶ ಮಾಡುವ ವ್ಯಕ್ತಿಯು ಒಂದು ವರ್ಷದವರೆಗಿನ ಅವಧಿಯ ಎರಡರಲ್ಲೊಂದು ಬಗೆಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕುದು.

**ಕಲಂ 354:** ಮಹಿಳೆಯ ಮೇಲೆ ಅತ್ಯಾಚಾರವೆಸಗುವ ಉದ್ದೇಶ ದಿಂದ ಅವಳ ಮೇಲೆ ಹಲ್ಲೆ ಅಥವಾ ಅಪರಾಧಿಕ ಬಲಪ್ರಯೋಗ ಮಾಡುವುದು.

ಯಾವುದೇ ಹೆಂಗಸಿನ ಮಾನಭಂಗ ಮಾಡುವ ಉದ್ದೇಶದಿಂದ ಅಥವಾ ಅದರಿಂದಾಗಿ ಅವಳ ಮಾನಭಂಗವಾಗುವ ಸಂಭವವಿದೆ ಯೆಂದು ತಿಳಿದೂ ಅವಳ ಮೇಲೆ ಹಲ್ಲೆ ಮಾಡುವ ಅಥವಾ ಅಪರಾಧಿಕ ಬಲಪ್ರಯೋಗ ಮಾಡುವ ಯಾವನೇ ವ್ಯಕ್ತಿಯು ಎರಡು ವರ್ಷ ಗಳವರೆಗಿನ ಎರಡರಲ್ಲೊಂದು ಬಗೆಯ ಕಾರಾವಾಸದಿಂದ ಅಥವಾ ಜುಲ್ಮಾನೆಯಿಂದ ಅಥವಾ ಅವೆರಡರಲ್ಲೊಂದು ದಂಡಿತನಾಗತಕ್ಕುದ್ದು.

ಒಬ್ಬ ಮಹಿಳೆ ಚುಡಾಯಿಸುವ ಹಿಂಸೆಗೆ ಗುರಿಯಾದಲ್ಲಿ, ಪೊಲೀಸ್ ಠಾಣೆಗೆ ದೂರನ್ನು ನೀಡಿದ್ದಲ್ಲಿ, ಈ ಮೇಲಿನ ಕಲಂನಡಿ ಪ್ರಕರಣ ದಾಖಲಿಸಬಹುದು. ಆದರೆ ಸಾಮಾನ್ಯವಾಗಿ ಕರ್ನಾಟಕದಲ್ಲಿ 'ಕರ್ನಾಟಕ ಪೊಲೀಸ್ ಕಾಯ್ದೆ'ಯಡಿ ಪ್ರಕರಣವನ್ನು ದಾಖಲಿಸುತ್ತಾರೆ. ಇದು ಪ್ರಕರಣವನ್ನು ಕೇವಲ ರಸ್ತೆಯಲ್ಲಿ ಅಸಭ್ಯ ವರ್ತನೆಗೆ ಸೀಮಿತಗೊಳಿಸುತ್ತದೆ ಮತ್ತು ಇದರಡಿ ದಾಖಲಾದ ಪ್ರಕರಣಗಳಿಗೆ ಕೇವಲ ದಂಡವನ್ನು ವಿಧಿಸಲಾಗುತ್ತದೆ ಅದು ಕೂಡ ಅತ್ಯಂತ ಕಡಿಮೆ. ಭಾರತೀಯ ದಂಡ ಸಂಹಿತೆಯಡಿ ಪ್ರಕರಣ ದಾಖಲಿಸಿದರೆ ಕೆಲಸ ಹೆಚ್ಚು ಮತ್ತು ಜವಾಬ್ದಾರಿ ಕೂಡ ಹೆಚ್ಚು ಹಾಗಾಗಿಯೇ ಪೊಲೀಸ್ ಕಾಯ್ದೆಯಡಿ ಪ್ರಕರಣ ದಾಖಲಿಸಿ ಆರಾಮಾಗಿ ಕೈ ತೊಳೆದುಕೊಂಡುಬಿಡುತ್ತಾರೆ. ಕೆಲ ಠಾಣೆಗಳಲ್ಲಿ ವಿಚಾರಿಸಿದರೆ ಅಂಥ ಪ್ರಕರಣಗಳು ದಾಖಲಾಗುವುದೇ ಇಲ್ಲ ಎಂದು ತಿಳಿಸುತ್ತಾರೆ ಮತ್ತು ಹಲವಾರು ಠಾಣೆಗಳಲ್ಲಿ ಯಾವ ಕಾಯ್ದೆಯಡಿ ಅಥವಾ ಕಲಂನಡಿ ಪ್ರಕರಣ ದಾಖಲಿಸಬೇಕೆಂಬುದೇ ತಿಳಿದಿರುವುದಿಲ್ಲ!!

ದಿನೇ ದಿನೇ ಹೆಚ್ಚುತ್ತಿರುವ ಈ ಪಿಡುಗಿನ ಬಗ್ಗೆ ನಮ್ಮ ದೇಶದ




ಉಚ್ಚ ನ್ಯಾಯಾಲಯವು (ಸುಪ್ರೀಂ ಕೋರ್ಟ್) ಕೂಡ ಪ್ರತ್ಯೇಕ ಕಾನೂನು ಇಲ್ಲದಿರುವುದರ ಬಗ್ಗೆ ಕಳಕಳಿ ವ್ಯಕ್ತಪಡಿಸಿದೆ. ಭಾರತೀಯ ದಂಡ ಸಂಹಿತೆಯಡಿ ಪ್ರಕರಣ ದಾಖಲಿಸಬಹುದಾದರೂ ಪುನಃ ದೌರ್ಜನ್ಯ ಕ್ಕೊಳಗಾದ ಮಹಿಳೆಯೇ ಇನ್ನಷ್ಟು ಒತ್ತಡಕ್ಕೆ ಒಳಗಾಗುವ ಸಾಧ್ಯತೆ ಹೆಚ್ಚು. ಏಕೆಂದರೆ ಇಲ್ಲಿ ಆರೋಪವನ್ನು ಸಾಬೀತುಪಡಿಸುವ ಹೊಣೆ ಪ್ರಾಸಿಕ್ಯೂಷನ್ ಅಂದರೆ ದೂರುದಾರಳ ಮೇಲೆಯೇ ಇರುತ್ತದೆ. ಹಾಗಾಗಿ ನೊಂದ ಮಹಿಳೆ ಪೊಲೀಸ್ ಠಾಣೆಗೆ ಹೋಗುವ ಧೈರ್ಯ ಮಾಡುವುದೇ ಇಲ್ಲ.

ಇತ್ತೀಚೆಗೆ 2012 ನವೆಂಬರ್‌ರಂದು *ಡೆಪ್ಯುಟಿ ಇನ್ಸ್‌ಪೆಕ್ಟರ್ ಆಫ್ ಪೊಲೀಸ್* ಮತ್ತು *ಎಸ್.ಸಮುತಿರಾಮ್* ಪ್ರಕರಣದಲ್ಲಿ ಚುಡಾಯಿಸುವುದು ಕೂಡ ಒಬ್ಬ ಮಹಿಳೆಯ ಮೂಲಭೂತ ಹಕ್ಕುಗಳ ಉಲ್ಲಂಘನೆಯೆಂದು ಉಚ್ಚ ನ್ಯಾಯಾಲಯವು (ಸುಪ್ರೀಂ ಕೋರ್ಟ್) ಪರಿಗಣಿಸಿದೆ. ಹಾಗಾಗಿ ಚುಡಾಯಿಸುವ ವಿಚಾರಕ್ಕೆ ಪ್ರತ್ಯೇಕ ಕಾನೂನು ತರಬೇಕೆಂದು ಸರ್ಕಾರಕ್ಕೆ ನಿರ್ದೇಶಿಸಿದೆ ಜೊತೆಗೆ ಕಾಯ್ದೆ ಬರುವವರೆಗೂ ಈ ಕೆಳಗಿನ ನಿರ್ದೇಶನ ಗಳನ್ನು ನೀಡಿದೆ:

ಅ) ಎಲ್ಲಾ ರಾಜ್ಯ ಮತ್ತು ಸಂಯುಕ್ತ ರಾಜ್ಯಗಳು ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ, ಮೆಟ್ರೋ ನಿಲ್ದಾಣ, ಸಿನಿಮಾ ಥಿಯೇಟರುಗಳು, ಪಾರ್ಕ್, ಬೀಚ್, ಸಾರ್ವಜನಿಕ ವಾಹನಗಳು, ದೇವಸ್ಥಾನಗಳು ಮುಂತಾದ ಸಾರ್ವಜನಿಕ ಪ್ರದೇಶಗಳಲ್ಲಿ ಇಂಥ ಪ್ರಕರಣಗಳನ್ನು ನಿಯಂತ್ರಣ ಮತ್ತು ಮೇಲ್ವಿಚಾರಣೆ ಮಾಡಲು ಮಹಿಳಾ ಪೊಲೀಸ್ ಸಿಬ್ಬಂದಿಗಳನ್ನು ಗಸ್ತು ವೇಷದಲ್ಲಿ ನಿಯೋಜಿಸುವುದು

ಆ) ಎಲ್ಲಾ ರಾಜ್ಯ ಮತ್ತು ಸಂಯುಕ್ತ ರಾಜ್ಯಗಳು ಸಾರ್ವಜನಿಕ ಪ್ರದೇಶಗಳಲ್ಲಿ ಸಿಸಿಟಿವಿ ಕ್ಯಾಮೆರಾಗಳನ್ನು ಅಳವಡಿಸುವುದು, ಇದರಿಂದ ತಪ್ಪಿತಸ್ಥರನ್ನು ಸುಲಭವಾಗಿ ಹಿಡಿಯಬಹುದು

ಇ) ಯಾವುದೇ ವಿದ್ಯಾ ಸಂಸ್ಥೆ, ದೇವಸ್ಥಾನ, ಸಿನಿಮಾ ಥಿಯೇಟರು, ಬಸ್ ನಿಲ್ದಾಣ, ರೈಲ್ವೆ ನಿಲ್ದಾಣಗಳ ಆಡಳಿತ ಮಂಡಳಿಯು ಚುಡಾಯಿಸುವ ವಿಚಾರವನ್ನು ಹತ್ತಿಕ್ಕುವುದಕ್ಕಾಗಿ ಬೇಕಾದ ಕ್ರಮಗಳನ್ನು ತೆಗೆದುಕೊಳ್ಳುವುದು ಮತ್ತು ಇಂತಹ ಪ್ರಕರಣ ಬಗ್ಗೆ ಮಾಹಿತಿ ದೊರಕಿದ್ದಲ್ಲಿ ಹತ್ತಿರದ ಪೊಲೀಸ್ ಠಾಣೆ ಅಥವಾ ಮಹಿಳಾ ಸಹಾಯ ಕೇಂದ್ರಗಳಿಗೆ ಕೂಡಲೆ ಮಾಹಿತಿ ನೀಡುವುದು

ಈ) ಯಾವುದೇ ಸಾರ್ವಜನಿಕ ಸಾರಿಗೆ ವಾಹನಗಳಲ್ಲಿ ಪ್ರಯಾಣಿಕರೇ ಆಗಲಿ ಅಥವಾ ಅದರ ನಿರ್ವಾಹಕರೇ ಆಗಲಿ ಮಹಿಳೆಯರನ್ನು ಚುಡಾಯಿಸಿದರೆ, ಆಬಾಧಿತ ಮಹಿಳೆ ದೂರನ್ನು ನೀಡಿದರೆ ಆ ವಾಹನವನ್ನು ಹತ್ತಿರದ ಪೊಲೀಸ್ ಠಾಣೆಗೆ ಕರೆದುಕೊಂಡು ಹೋಗುವುದು. ಈ ಕ್ರಮವನ್ನು ತೆಗೆದುಕೊಳ್ಳಲು ವಿಫಲವಾದಲ್ಲಿ

ವಾಹನ ಚಲಾಯಿಸುವ ಪರವಾನಗಿಯನ್ನು ರದ್ದು ಪಡಿಸತಕ್ಕುದು.

ಉ) ಚುಡಾಯಿಸುವ ವಿಚಾರವನ್ನು ತೊಲಗಿಸಲು ಮಹಿಳಾ ಸಹಾಯ ಕೇಂದ್ರಗಳನ್ನು ಎಲ್ಲಾ ರಾಜ್ಯ ಮತ್ತು ಸಂಯುಕ್ತ ರಾಜ್ಯಗಳು ಮೂರು ತಿಂಗಳೊಳಗೆ ಸ್ಥಾಪಿಸುವುದು

ಊ) ಎಲ್ಲಾ ಸಾರ್ವಜನಿಕ ಸ್ಥಳಗಳಲ್ಲಿ ಚುಡಾಯಿಸುವುದರ ವಿರುದ್ಧ ಎಚ್ಚರಿಕೆ ನೀಡುವ ಫಲಕಗಳನ್ನು ಹಾಕುವುದು

ಋ) ಸಾರ್ವಜನಿಕರೂ ಕೂಡ ಜವಾಬ್ದಾರಿಯುತವಾಗಿ ವರ್ತಿಸುವುದು, ಈ ವಿಚಾರ ಕಂಡುಬಂದರೆ ಕೂಡಲೆ ಹತ್ತಿರದ ಪೊಲೀಸ್ ಠಾಣೆ ಅಥವಾ ಮಹಿಳಾ ಸಹಾಯ ಕೇಂದ್ರಗಳಿಗೆ ಮಾಹಿತಿ ನೀಡುವುದು.

ಎ) ಈ ದೌರ್ಜನ್ಯವನ್ನು ಹತ್ತಿಕ್ಕುವ ಸಲುವಾಗಿ ಎಲ್ಲಾ ರಾಜ್ಯ ಮತ್ತು ಸಂಯುಕ್ತ ರಾಜ್ಯಗಳು ಸಂಬಂಧಪಟ್ಟ ಇಲಾಖೆಗಳ ಅಧಿಕಾರಿಗಳಿಗೆ ಸೂಕ್ತ ನಿರ್ದೇಶನವನ್ನು ನೀಡುವುದು

ಮೇಲೆ ನೀಡಿರುವ ನಿರ್ದೇಶನಗಳು ಸ್ವಾಗತಾರ್ಹವಾಗಿವೆ. ಉಚ್ಚ ನ್ಯಾಯಾಲಯವು (ಸುಪ್ರೀಂ ಕೋರ್ಟ್) ನಿರ್ದೇಶಿಸಿರುವಂತೆ ಹೆಮ್ಮರದಂತೆ ಬೆಳೆಯುತ್ತಿರುವ ಈ ಪಿಡುಗನ್ನು ಹತ್ತಿಕ್ಕಲು ಮತ್ತು ನಿಯಂತ್ರಿಸಲು ಪ್ರತ್ಯೇಕ ಕಾನೂನು ರೂಪಿಸಬೇಕಿದೆ. ಆದರೆ ಈ ನಿರ್ದೇಶನಗಳನ್ನು ಸರ್ಕಾರಗಳು ಅಷ್ಟು ಗಂಭೀರವಾಗಿ ಪರಿಗಣಿಸಿರುವಂತೆ ಕಾಣುವುದಿಲ್ಲ. ಯಾವುದೇ ಮಹಿಳಾ ದೌರ್ಜನ್ಯದ ವಿಚಾರಗಳನ್ನು ನಿರ್ಲಕ್ಷಿಸುವ ಸರ್ಕಾರಗಳು ಇನ್ನು ಚುಡಾಯಿಸುವ ವಿಚಾರವನ್ನು ದೌರ್ಜನ್ಯದ ವಿಚಾರವೆಂದು ಪರಿಗಣಿಸದೇ ಇರುವ ಸಂದರ್ಭದಲ್ಲಿ ಇದನ್ನು ಹತ್ತಿಕ್ಕಲು ಯಾವುದೇ ಕ್ರಮ ತೆಗೆದುಕೊಳ್ಳದೇ ಇರುವುದು ಸೋಜಿಗದ ವಿಚಾರವೇನಲ್ಲ. ಇಂಥ ಜಡ್ಡುಗಟ್ಟಿರುವ ಸರ್ಕಾರವನ್ನು ಎಳಿಸಬೇಕಿದೆ.

ಆದರೆ ಮಾನಸಿಕವಾಗಿ ಅತ್ಯಂತ ಹಿಂಸೆ ಮಾಡುವ ಮತ್ತು ಅಭದ್ರತೆಯನ್ನು ತಂದೊಡ್ಡುವ ಈ ಚುಡಾಯಿಸುವ ಹಿಂಸೆಯ ವಿರುದ್ಧ ತಿರುಗಿ ನಿಲ್ಲುವ ಧೈರ್ಯವನ್ನು ಪ್ರತಿಯೊಬ್ಬ ಮಹಿಳೆಯು ಮಾಡಬೇಕಿದೆ. ಈ ವಿಚಾರಗಳನ್ನು ಯಾವುದೇ ಮುಜುಗರಕ್ಕೆ ಒಳಪಡದೆ ಎದುರಿಸಬೇಕು. ಪೊಲೀಸ್ ಠಾಣೆಗೆ ಹೋಗುವುದಾಗಲೀ ಅಥವಾ ನ್ಯಾಯಾಲಯಕ್ಕೆ ಹೋಗುವುದಾಗಲೀ ಅಪರಾಧವಲ್ಲ. ಯಾವುದೇ ತಪ್ಪು ಮಾಡದೇ ಮಹಿಳೆ ಎನ್ನುವ ಕಾರಣಕ್ಕೆ ಯಾವನೋ ಕೆಂಗಣ್ಣಿಗೆ ಗುರಿಯಾಗುವುದರ ವಿರುದ್ಧ ಗಟ್ಟಿಯಾಗಿ ನಿಲ್ಲಬೇಕು. ಜೊತೆಗೆ ನಮ್ಮ ಮುಂದೆ ಯಾವುದೇ ಮಹಿಳೆ ಹಿಂಸೆಗೆ ಒಳಪಟ್ಟರೆ ನಾವು ಸುಮ್ಮನೆ ಇರಬಾರದು. ಅವರೊಟ್ಟಿಗೆ ನಿಂತು ಅನ್ಯಾಯದ ವಿರುದ್ಧ ಹೋರಾಡಬೇಕು. ಇದೊಂದು ಮಾಮೂಲಿ ವಿಚಾರವೆನ್ನುವಷ್ಟು ಹಗುರವಾಗಿರುವ ಸಮಸ್ಯೆಯ ಸ್ವರೂಪವನ್ನು ಅದರಿಂದಾಗುವ ಪರಿಣಾಮಗಳನ್ನು ಎಲ್ಲೆಡೆ ಹರಡಬೇಕು. ಪ್ರತಿಯೊಬ್ಬ ಮಹಿಳೆಯು ತಮ್ಮ ಆತ್ಮರಕ್ಷಣೆ ಮಾಡುವುದನ್ನು ಕಲಿಯಬೇಕು. ಜೊತೆಗೆ ನಮ್ಮನ್ನು ಹಿಂಸಿಸುವವರಿಗೆ ತಕ್ಕ ಪಾಠ ಕಲಿಸಬೇಕು. ಏಕೆಂದರೆ ಚುಡಾಯಿಸುವುದು ಪುರುಷರ ಹಕ್ಕಲ್ಲ.

❑

## ಕಣ್ಣೋಟ...!

ಕಂಡಲ್ಲೆಲ್ಲಾ ಮುಳ್ಳುಗಳು
ಚುಚ್ಚುವುದೇ ಕಾಯಕವು
ಬೆಚ್ಚಿ ಬೀಳುವ ಹಾಗೆ.......

ಹುಚ್ಚು ಮನಸುಗಳ ಸಾಮ್ರಾಜ್ಯದಲಿ
ಮುಳ್ಳುಗಳದೇ ರಾಜ್ಯಭಾರ,
ಸುತ್ತಮುತ್ತಲ ಮುಳ್ಳುಗಳ ಹಾವಳಿಗೆ
ಬದುಕೇ ದುರ್ಬರ

ಹೆಜ್ಜೆ ಹೆಜ್ಜೆಗೂ ಇರಿತ
ದುರುಗುಟ್ಟುವ ದುಷ್ಟ
ಕಂಗಳ,
ಸೂಜಿ ಮೊನೆಯ ತಿವಿತ

ಮುಚ್ಚಿಟ್ಟ ಎದೆಯೆಡೆಗೆ
ಚುಚ್ಚುವವು , ಕೆಲವೊಮ್ಮೆ
ನೇರವಾಗಿ ,
ಕೆಲವೊಮ್ಮೆ ಕದ್ದುಮುಚ್ಚಿ

ಮುಚ್ಚಿಟ್ಟುಕೊಳ್ಳುವ ಪಾಠ
ಎಚ್ಚರಿಕೆಯಿಂದ ಕಲಿಸಿದೆ
ಚುಚ್ಚಲು ಕುಮ್ಮಕ್ಕು ಕೊಡುವ
ಇದೇ ಹುಚ್ಚು ಸಮಾಜ

ಚುಚ್ಚಿ ಚುಚ್ಚಿ ಗಾಯಗೊಂಡು
ಮೈ ಮನವೆಲ್ಲಾ ಬರೀ ತೂತು
ಎಂಥಾ ಹೀನ ಮುಳ್ಳುಗಳಿವು
ಥೂ.....ಥೂ.....ಥೂ.

■ ಶಿವಮ್ಮ ಎ.



# ಮಹಿಳೆಯರ ಮೇಲಿನ ದೌರ್ಜನ್ಯ: ಆಯಾಮಗಳು, ಕಾರಣಗಳು

■ ಊರ್ಮಿಳಾ ಪವಾರ್

ಇತ್ತೀಚಿನ ಪ್ರಕರಣಗಳನ್ನು ಗಮನಿಸಿದರೆ ಹೆಣ್ಣು ಎಂಬ ಪದದ ಅರ್ಥವೇ ಅತ್ಯಾಚಾರ ಸಹಿಸಿಕೊಳ್ಳುವವಳು ಎನ್ನುವಂತಾಗಿದೆ. ಹೆಣ್ಣು ಮೊದಲಿನಿಂದ ಬಗೆಬಗೆಯ ಸಂಕಟಗಳನ್ನು ಸಹಿಸಿಕೊಂಡೇ ಬಂದಿದ್ದಾಳೆ. ಪ್ರತಿ ಹೆಣ್ಣೂ ತನ್ನ ಜೀವನದ ಘಟನೆಗಳನ್ನು ಮೆಲುಕು ಹಾಕಿದರೆ ಸಾಕು, ಸಂಕಟಗಳ ವಿಶ್ವರೂಪ ಅರಿವಾಗುತ್ತದೆ.

ನನ್ನಮ್ಮ ಬುಟ್ಟಿ ಹೆಣೆಯುತ್ತ ನಾಲ್ಕೈದು ಮಕ್ಕಳನ್ನು ಬೆಳೆಸಿದಳು. ಅಪ್ಪ ತೀರಿಕೊಂಡ ಮೇಲೆ ಕಷ್ಟಪಟ್ಟು ನಮ್ಮನ್ನು ಓದಿಸಿ ಬೆಳೆಸಿದಳು. ಮುಂಬೈಗೆ ಬಂದೆವು. ಅಲ್ಲಿ ಬಂದ ನಂತರ 1975ರ ಸುಮಾರಿಗೆ ಮಹಿಳಾವಾದದ ಪರಿಚಯವಾಯ್ತು. ಹಾಗೆಯೇ ದಲಿತ ಚಳುವಳಿಯ ಪರಿಚಯವೂ.

ಮೈತ್ರಿ ಎಂಬ ಸಂಘಟನೆ ಸೇರಿದೆ. ಡಾ. ಮಂಜುಶ್ರೀ ಎಂಬ ಕೇಸಿನ ಕುರಿತು ಚರ್ಚೆಯಾಗುತ್ತಿದ್ದ ಕಾಲ ಅದು. ವರದಕ್ಷಿಣೆಗಾಗಿ ಒಬ್ಬ ವೈದ್ಯೆಯಾದ ಮಂಜುಶ್ರೀ ಸಂಕಟಕ್ಕೊಳಗಾಗಿದ್ದಳು. ನೋಡಿ, ವಿದ್ಯೆಯಾಗಲೀ, ವೈದ್ಯೆಯೆಂಬ ಸ್ಥಾನವಾಗಲೀ ಆ ಜೀವವನ್ನು ವರದಕ್ಷಿಣೆ ಎಂಬ ಪಿಡುಗಿನಿಂದ ರಕ್ಷಿಸಲಾಗಲಿಲ್ಲ. ನಂತರ ಮಥುರಾ ಕೇಸ್ ಸಂಭವಿಸಿತು. ಆ ಸಂದರ್ಭದಲ್ಲೇ ಈ ಹೆಣ್ಣುಮಕ್ಕಳ ಸಂಕಟದ ಬದುಕನ್ನು ನೋಡಿ, ಕೇಳಿ ನನ್ನ ಬೌದ್ಧಿಕ ಬೆಳವಣಿಗೆಯಾಯ್ತು ಎಂದು ಭಾವಿಸಿದ್ದೇನೆ. ನನಗೆ ಸಿಕ್ಕ ತಾರಾಬಾಯಿ ಶಿಂಧೆ ಪುಸ್ತಕ ಓದಿದೆ. ಅವಳಂತೂ ಎದ್ದುಕುಳಿತು ಎದೆ ಸೆಟೆಸಿದವಳಂತೆ ಎಷ್ಟು ದಿಟ್ಟವಾಗಿ ಬರೆಯುತ್ತಾಳೆಂದರೆ, ಮೊದಲ ಓದಿಗೇ ಯಾರಾದರೂ ದಂಗುಬಡಿಯಬೇಕು. 'ನಿಮ್ಮ ಗಂಡನ ಬಳಿ ಹೊಡೆತ ತಿಂದುತಿಂದು ಎದ್ದು ಅಡಿಗೆ ಮನೆಗೆ ಹೋಗುತ್ತೀರಿ. ಅಲ್ಲೇನು ಕೆಲಸದ ರಾಶಿ ಕಾದಿದೆಯೋ ಮಾಡುತ್ತೀರಿ. ನಂತರ ಒಂದು ಬಟ್ಟಲಿಗೆ ಎಣ್ಣೆ ಸುರುವಿಕೊಂಡು ಬರುತ್ತೀರಿ. ಏತಕ್ಕೆ? ಹೊಡೆತ ತಿಂದ ನಿಮ್ಮ ಮೈಗೆ ಹಚ್ಚಿಕೊಳ್ಳುವುದಕ್ಕಲ್ಲ, ಹೊಡೆಹೊಡೆದು ದಣಿದ ನಿಮ್ಮ ಗಂಡನ ಕೈಗೆ ಹಚ್ಚಿ ತಿಕ್ಕಲು..' ಎಂದು ತನ್ನನ್ನು ಅಸಹಾಯಕ ಎಂದುಕೊಂಡ ಹೆಂಗಸರನ್ನೇ ಮೂದಲಿಸುತ್ತಾಳೆ.

ನಮ್ಮೂರಿನ ಒಬ್ಬ ವಿಧವೆ ಬಸುರಿಯಾಗಿದ್ದಳು. ಊರು ಅವಳಿಗೆ ಬಸುರು ಇಳಿಸುವಂತೆ ತಾಕೀತು ಮಾಡಿ ಶಿಕ್ಷೆ ನೀಡಿತು. ಶಿಕ್ಷೆ ಏನೆಂದರೆ ಆ ಊರ ಹೆಣ್ಣುಮಕ್ಕಳು ಅವಳನ್ನೊಂದು ಕಂಬಕ್ಕೆ ಕಟ್ಟಿ, ಅವಳ ಎರಡೂ ಕೈಕಟ್ಟಿ ಬೆನ್ನು ಮತ್ತು ಹೊಟ್ಟೆ ಮೇಲೆ ಹೊಡೆಯಬೇಕು. ರಕ್ತಸ್ರಾವವಾಗಿ ಬಸಿರು ಇಳಿಯಬೇಕು. ಈ ಕ್ರೂರ ಶಿಕ್ಷೆಯನ್ನು ಹೆಣ್ಣುಮಕ್ಕಳು ಯಾವ ಕರುಣೆಯಿಲ್ಲದೆ ನೀಡುತ್ತಿದ್ದರೆ, ರಕ್ತಹರಿಸುವವಳನ್ನು ನೋಡನೋಡುತ್ತ ಬಸಿರಿಗೆ ಕಾರಣವಾದವನೂ ಆ ಗುಂಪಿನಲ್ಲಿ ಕೂತು ಅವಳನ್ನು ಬೈಯುತ್ತಿದ್ದ!

ಆಮ್ರವಾಲಿ ಎಂಬ ನನ್ನದೊಂದು ಕಥೆಯಿದೆ. ರತ್ನಗಿರಿ ಕಡೆಯ ಮಾವಿನಹಣ್ಣು ಮಾರುವ ಹೆಣ್ಣುಮಗಳ 10–12 ವರ್ಷದ ಮಗನ ಕಣ್ಣಿನಲ್ಲಿ ತಾಯಿಯ ಕತೆ ಅದು. ಮರಾಠಿಯಲ್ಲಿ ಚೋಲಿ ಎಂದರೆ ಎರಡರ್ಥವಿದೆ – ಮಾವಿನ ಹಣ್ಣು ಹಾಗೂ ರವಿಕೆ. ಆ ಹೆಣ್ಣುಮಕ್ಕಳ ಹತ್ತಿರ ಬರುವ ಗಂಡಸರು ಕೆಲವೊಮ್ಮೆ ಎರಡರ್ಥ ಬರುವ ಮಾತು ಹೇಳುತ್ತಾರೆ: 'ಚೋಲಿ ಕೆ ಪೀಛೆ ಕ್ಯಾ ಹೇ?', 'ಚೋಲಿ ಕೋ ದಬಾಕೆ ದೇಖ್ಲೂಂ?' ಹೀಗೇ. ಅದಕ್ಕೆ ಆ ಮಹಿಳೆಯರು ದಿಟ್ಟವಾಗಿಯೋ ಅಥವಾ ತಮಾಷೆಯಾಗಿಯೋ ಉತ್ತರಿಸಿ ಪಾರಾಗುತ್ತಾರೆ. ಆ ಕತೆ ಬಹಳ ಜನರ ಮೆಚ್ಚುಗೆ ಪಡೆಯಿತು. ವಿಶ್ವವಿದ್ಯಾಲಯವೊಂದಕ್ಕೆ ಪಠ್ಯಪುಸ್ತಕವೂ ಆಯಿತು. ಆಗ ಆ ಕತೆಯು ಅಶ್ಲೀಲ, ಪೋರ್ನ್ ಎಂದು ಜರಿದ ಸಂಘಪರಿವಾರದ ವಿದ್ಯಾರ್ಥಿ ಸಂಘಟನೆಯು ಅದನ್ನು ಬ್ಯಾನ್ ಮಾಡಬೇಕೆಂಬ ಚಳುವಳಿ ಶುರುಮಾಡಿತು. ಕೊನೆಗೆ ವಿದ್ಯಾರ್ಥಿಗಳು, ಪಾಠ ಮಾಡುವ ಅಧ್ಯಾಪಕರು ಪರಿಶೀಲನಾ ಸಮಿತಿಯ ಎದುರು ಅದರಲ್ಲಿ ಅಶ್ಲೀಲವಾದುದೇನೂ ಇಲ್ಲ ಎಂದು ಹೇಳಿದ ಮೇಲೆ ಅದು ಮತ್ತೆ ಪಠ್ಯವಾಯಿತು. ಹೀಗೆ ಬರೆಯುವುದರ ಮೇಲೂ ಗೆರೆ ಎಳೆಯಲಾಗುತ್ತದೆ. ಬರೆದಿದ್ದನ್ನು ಪ್ರಕಟ ಮಾಡುವುದರಲ್ಲೂ ತಾರತಮ್ಯ ತೋರಿಸಲಾಗುತ್ತದೆ. ಇಂಥ ಕಾಲದಲ್ಲೇ ಮಹಿಳಾ ಪ್ರಕಾಶಕರು ಸೃಷ್ಟಿಯಾದರು.



1927 ಡಿಸೆಂಬರ್ 25ರಂದು ಅಂಬೇಡ್ಕರ್ ಮನುಸ್ಮೃತಿ ಸುಟ್ಟಿದ್ದರು. ಮನು ಹೆಣ್ಮಕ್ಕಳನ್ನು, ದಲಿತರನ್ನು ಹೇಗೆ ನಡೆಸಿಕೊಳ್ಳಬೇಕೆಂದು ಹೇಳಿದ್ದ ಎನ್ನುವುದು ಎಲ್ಲರಿಗೂ ಗೊತ್ತು. ಮನುಧರ್ಮದ ಕಾರಣಕ್ಕಾಗೇ ದಲಿತ ಮಹಿಳೆಯರು ದುಪ್ಪಟ್ಟು ಶೋಷಣೆ ಅನುಭವಿಸುತ್ತಿದ್ದಾರೆ ಎಂದೂ ದೃಢವಾಯಿತು. ಬೌದ್ಧಧರ್ಮದ ಕಡೆಗೆ ವಾಲಿದೆ. ಬುದ್ಧನ ಅಮ್ಮ-ಮಾ ಪ್ರಜಾಪತಿ ಗೌತಮಿ – ತನ್ನ ಜೊತೆ 500 ಜನ ಹೆಣ್ಮಕ್ಕಳನ್ನು ಕರೆತಂದಳು. ಹಲವರ ವಿರೋಧದ ನಡುವೆಯೂ ಸಂಘದಲ್ಲಿ ಹೆಣ್ಣುಮಕ್ಕಳನ್ನು ಸೇರಿಸಿಕೊಳ್ಳಬೇಕೋ ಬೇಡವೋ ಎಂದು ಯೋಚಿಸಿದ ಬುದ್ಧ ಕೊನೆಗೆ ಅವರಿಗೂ ಸ್ಥಾನ ನೀಡಿದ. ಆ ಹೆಣ್ಮಕ್ಕಳು ಬರೆದ ಗೀತೆಗಳು 522 ಥೇರಿಗಾಥಾಗಳಾಗಿ ದಾಖಲಿಸಲ್ಪಟ್ಟಿವೆ. ಹೀಗೆ ಲಭ್ಯವಿರುವ ಮಹಿಳಾ ಸಾಹಿತ್ಯವನ್ನೆಲ್ಲ ಓದುತ್ತ ಹೋದೆ. ಆದರೆ ಓದುತ್ತ ಹೋದಂತೆ ದಲಿತ ಮಹಿಳೆಯ ಅನುಭವ ಲೋಕ, ಪ್ರಶ್ನೆಗಳು ಬೇರೆಯೇ ಎನಿಸಿತು. ಉಳಿದ ಮಹಿಳೆಯರ ಬರಹದಲ್ಲೂ ಮಹಿಳಾ ಪ್ರಶ್ನೆಗಳು ಬರುತ್ತವೆ, ಇಲ್ಲ ಎನ್ನುವುದಿಲ್ಲ. ಆದರೆ ಅದು ದಲಿತ ಮಹಿಳಾ ಪ್ರಶ್ನೆಗಳನ್ನು ಎತ್ತುವುದಿಲ್ಲ.

ಈ ವೇಳೆಗೆ ಶಾಬಾನು ಕೇಸ್ ಮುನ್ನೆಲೆಗೆ ಬಂತು. ಆ ವಯಸ್ಸಾದ ದಿಟ್ಟ ಮಹಿಳೆ ಕೇಳಿದ ಪ್ರಶ್ನೆಗೆ ತತ್ತರಿಸಿದ ಮೂಲಭೂತವಾದಿ ಪುರುಷ ಸಮುದಾಯ ಸರ್ಕಾರದ ಹಸ್ತಕ್ಷೇಪ ಬಯಸಿತು. ಕೊನೆಗೆ ಕೇಸು ಬಿದ್ದು ಹೋಯಿತು. ಆಗ ಮುಸ್ಲಿಂ ಮಹಿಳೆಯರು ಎಚ್ಚೆತ್ತರು. ಬುರ್ಖಾ ತಮ್ಮನ್ನು ಬಂಧಿಸಿಟ್ಟಿದೆ ಎಂದು ಅವರೂ ಅರಿತರು. ರೂಪ್ ಕನ್ವರ್ ಸತಿ ಪ್ರಕರಣವೂ ಆಗಲೇ ಸಂಭವಿಸಿತು. ಭಾಂವ್ರಿದೇವಿ ಪ್ರಕರಣದಲ್ಲಿ ರಾಜಸ್ಥಾನ ಹೈಕೋರ್ಟ್ ನೀಡಿದ ತೀರ್ಪು ದೇಶಾದ್ಯಂತ ಗಮನ ಸೆಳೆಯಿತು. ದೊಡ್ಡಪ್ಪ ಮತ್ತು ಮಕ್ಕಳು ಜೊತೆಜೊತೆಗಿರುವಾಗ ಅವರು ಲೈಂಗಿಕ ಕ್ರಿಯೆಯಲ್ಲಿ ಒಟ್ಟು ತೊಡಗಲು ಸಾಧ್ಯವಿಲ್ಲ; ಅವಳ ಗಂಡನೆದುರೇ ಅತ್ಯಾಚಾರ ಆಗಿದೆ ಎನ್ನುತ್ತೀರಿ. ತನ್ನ ಹೆಂಡತಿಯನ್ನು ರೇಪ್ ಮಾಡುವುದು ನೋಡಿ ಯಾವ ಗಂಡನೂ ಸುಮ್ಮನಿರುವುದಿಲ್ಲ; ಕೆಳಜಾತಿಯ, ಅಷ್ಟೇನೂ ಚಂದವಿಲ್ಲದ ಅವಳ ಮೇಲೆ ಮೇಲ್ಜಾತಿ ಗಂಡಸರು ಅತ್ಯಾಚಾರ ಮಾಡಿರುವ ಸಾಧ್ಯತೆಯಿಲ್ಲ ಎಂದು ಹೇಳಿದ ಹೈಕೋರ್ಟು ದುಡ್ಡಿಗಾಗಿ ಅವಳು ಕತೆ ಕಟ್ಟಿದ್ದಾಳೆಂದು ತನ್ನ ತೀರ್ಪಿನಲ್ಲಿ ಬರೆಯಿತು. ಆ ತೀರ್ಪಿನ ವಿರುದ್ಧ ಪ್ರತಿಭಟನೆ ನಡೆಯಿತು. ನಾಗಲಾಪಲ್ಲಿ, ಖೈರ್ಲಾಂಜಿ, ಧರ್ಮಪುರಿ ಘಟನೆಗಳು ಸಂಭವಿಸಿದವು. ಆಗೆಲ್ಲ ಪ್ರತಿಭಟಿಸಿದೆವು.

ಹೀಗೊಂದು ಪ್ರಗತಿಪರ ಮಹಿಳಾ ಚಳುವಳಿ ನಡೆಯುತ್ತಿದ್ದಾಗ ಜಾಗತೀಕರಣ, ರಥಯಾತ್ರಾ, ಬಾಬ್ರಿ ಮಸೀದಿ ಎಲ್ಲ ಸಂಭವಿಸಿತು. ಎಲ್ಲ ಪ್ರಗತಿಪರ ಮಹಿಳಾ ಸಂಘಟನೆಗಳು ಹಿಂದೆ ಸರಿದವು. ಎಲ್ಲರೂ ತಂತಮ್ಮ ಧರ್ಮಕ್ಕೆ, ಜಾತಿಗೆ ಅಂಟಿಕೊಳ್ಳತೊಡಗಿದರು. ಅದು ಸುರಕ್ಷಿತವೆಂದು ಭಾವಿಸತೊಡಗಿದರು. ಗೋಧ್ರಾ ಘಟನೆಯ ನಂತರದ ಗಲಭೆಗಳಲ್ಲಿ ಬಸುರಿಯರ ಹೊಟ್ಟೆಗೆ ತ್ರಿಶೂಲದಿಂದ ತಿವಿದು ಅತ್ಯಾಚಾರ ನಡೆಸಲಾಯ್ತು. ನೂರಾರು ಬುಡಕಟ್ಟು ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ, ಸ್ತ್ರೀ ಭ್ರೂಣ ಹತ್ಯೆ, ಖಾಪ್ ಪಂಚಾಯ್ತಿಯ ಮಹಿಳಾ ವಿರೋಧಿ ನಿರ್ಣಯಗಳು, ಅಂತರ್ಜಾತಿ ಮದುವೆ ನಿರ್ಬಂಧ, ಮರ್ಯಾದಾ ಹತ್ಯೆ, ಸೈನ್ಯ ಮಹಿಳೆಯರ ಮೇಲೆ ನಡೆಸುವ ಅತ್ಯಾಚಾರ – ಓಹ್! ಮಹಿಳೆಯರ ಮೇಲೆ ದೌರ್ಜನ್ಯ ಎಸಗಲು ಎಷ್ಟು ಕಾರಣಗಳು!?

ಈಗಂತೂ ಜಾಗತೀಕರಣ ಕಾಲದಲ್ಲಿ ಮಾರುಕಟ್ಟೆಗೆ ಕೊಳ್ಳುವವರನ್ನು ಆಕರ್ಷಿಸಲು ಮಾಡೆಲ್ ಆಗಿ ಮಹಿಳೆಯೇ ಬೇಕು. ಜೊತೆಗೇ ಮಹಿಳೆಯನ್ನು ಬೇರೆಬೇರೆ ರೀತಿ ಬಳಸಿಕೊಳ್ಳುವಂತಹ ಜಾಲಗಳು ಸೃಷ್ಟಿಯಾಗಿವೆ. ಇವೆಲ್ಲ ಹೆಣ್ಣಿಗೆ ಎಂತೆಂಥ ಸಂಕಟ, ನೋವುಗಳನ್ನು ತಂದಿಟ್ಟಿವೆಯೋ ಇನ್ನಷ್ಟೇ ಗೊತ್ತಾಗಬೇಕು. ಹೆಣ್ಣು ಸರಕಾದ ಕಾರಣವೇ ಟ್ರಾಫಿಕಿಂಗ್ ಶುರುವಾಯಿತು. ಬಾರ್ ಗರ್ಲ್ಸ್ ಹುಟ್ಟಿಕೊಂಡರು. ಲೈವ್‌ಬ್ಯಾಂಡ್‌ನಲ್ಲಿದ್ದ ಅಂತಹ ಒಬ್ಬಳು – ವೈಶಾಲಿ ಹದಂ – ತನ್ನ ಆತ್ಮಕತೆ ಬರೆದಿದ್ದಾಳೆ, ಅದನ್ನು ಓದಿದವರು ತಲ್ಲಣಿಸಿ ಹೋಗಬೇಕು. ಅಂಥವರ ಮಕ್ಕಳ, ಗಂಡನ, ಕುಟುಂಬದವರ ಕತೆಗಳು, ಕಷ್ಟಗಳು ಏನೋ? ಹೊರಜಗತ್ತು ಅದನ್ನೆಂದೂ ಗಮನಿಸದು. ಅತ್ಯಂತ ನೋವಿನಿಂದ ಬರೆದುಕೊಂಡ ಒಂದು ಪ್ರಸಂಗವಿದೆ. ಅವಳ ಮಗ ಎಷ್ಟು ಗಂಡಾಗಿಬಿಟ್ಟನೆಂದರೆ ಒಮ್ಮೆ ತನ್ನ ಜೊತೆ ಮಲಗು ಬಾ ಎಂದು ಅಮ್ಮನನ್ನೇ ಕರೆದನಂತೆ! ಊರಿನ ಉಳಿದೆಲ್ಲ ಗಂಡಸರೊಟ್ಟಿಗೆ ಮಲಗುತ್ತೀ, ನೀನೊಂದು ಹೆಣ್ಣು ಅಷ್ಟೇ. ನನ್ನ ಜೊತೆಯೂ ಮಲಗು ಬಾ ಎನ್ನುವುದು ಅವನ ವಾದ!!

ಇಂಥವೆಲ್ಲ ನಡೆಯುತ್ತಿರುವಾಗ ನಮ್ಮ ಧರ್ಮ ಏನು ಮಾಡಿತು? ಧರ್ಮ ಗುರುಗಳು ಏನು ಮಾಡಿದರು? ಆಸಾರಾಂ ಬಾಪು ಏನು ಹೇಳಿದರು? ಅಣ್ಣಾ ಎಂದು ರಾಖಿ ಕಟ್ಟಿ ಎನ್ನುತ್ತಾರೆ. ಅನಿರುದ್ಧ ಬಾಪು ತಾವು ಹೇಳಿಕೊಡುವ ಮಂತ್ರ ಹೇಳುವವರ ಮೇಲೆ ರೇಪ್ ಆಗುವುದಿಲ್ಲ ಎನ್ನುತ್ತಾರೆ. ಐದು ಗಂಟೆ ಒಳಗೆ ಮನೆಗೆ ಬನ್ನಿ, ಪರ್ಸಿನಲ್ಲಿ ಮೆಣಸಿನ ಪುಡಿ ಇಟ್ಕೊಳ್ಳಿ, ಅತ್ಯಾಚಾರಿಗಳಿಗೆ ಗಲ್ಲು ಶಿಕ್ಷೆ ಕೊಡಿ – ಹೀಗೇ ಏನೇನೋ ಮಾತು ಕೇಳಿಬರುತ್ತಿದೆ. ಆದರೆ ಇಂಥ ಕ್ರಮಗಳು ಮಹಿಳೆಗೆ ಸ್ವಾತಂತ್ರ್ಯ ಮತ್ತು ರಕ್ಷಣೆ ಎರಡನ್ನೂ ಒಟ್ಟಿಗೇ ನೀಡಬಲ್ಲವೆ?

## ಇದಕ್ಕೆಲ್ಲ ಏನು ಮಾಡುವುದು?

ಓದಿ ಬರೆದ ನಮ್ಮೆಲ್ಲರ ಕರ್ತವ್ಯ, ಈ ಕೊಳಕು ತೊಳೆಯುವುದು. ಮಹಿಳೆ ಜಾಗೃತಳಾಗಬೇಕು. ಸಂಘಟಿತಳಾಗಬೇಕು. ಈಗ ಒನ್ ಮಿಲಿಯನ್ ರೈಸಿಂಗ್ ಅಭಿಯಾನ ನಡೆಯುತ್ತಿದೆ. ಒಟ್ಟಾರೆ ಹಬ್ಬ-ಸೀರೆ-ಅಡಿಗೆ-ಮಕ್ಕಳು ಈ ಎಲ್ಲವೂ ಇರಲಿ. ಅದರ ಜೊತೆಗೆ ಲಿಂಗ/ಧರ್ಮ/ಜಾತಿ/ಭಾಷೆ ಎಂಬ ಎಲ್ಲ ಗೋಡೆಗಳ ತೊರೆದು ಆಕೆ ಮುಂದುವರೆಯಬೇಕು. ನಮ್ಮ ನಮ್ಮ ಅಂತರಾಳ ಮಾತನಾಡಬೇಕು. ಜಾಗೃತಿ ಯುದ್ಧ ನಡೆಯಬೇಕು.

❑

---

*ಮಂಗಳೂರು ವಿಶ್ವವಿದ್ಯಾಲಯದಲ್ಲಿ ಮಾರ್ಚ್ 7, 2013ರಂದು ನಡೆದ 'ಮಹಿಳೆಯರ ಮೇಲಿನ ದೌರ್ಜನ್ಯ: ಆಯಾಮಗಳು, ಕಾರಣಗಳು' ಎಂಬ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದ ಪ್ರಸಿದ್ಧ ಮರಾಠಿ ಲೇಖಕಿ, ಹೋರಾಟಗಾರ್ತಿ ಊರ್ಮಿಳಾ ಪವಾರ್ ಭಾಷಣ.*

*ಸಂಗ್ರಹಾನುವಾದ – **ಡಾ. ಎಚ್.ಎಸ್.ಅನುಪಮಾ***

# ದಿನ ನಿತ್ಯದ ಫೆಮಿನಿಸಮ್



■ ಅಕ್ಷತಾ ವಿನಾಯಕ್

ಸಾಹಿತ್ಯದ ವಿದ್ಯಾರ್ಥಿನಿಯಾಗಿದ್ದು ನಾನು ಪುರುಷಪ್ರಧಾನ್ಯತೆ , ಮಹಿಳಾ ವಾದಗಳ ಕುರಿತು ಆಗಾಗ ಓದುತ್ತಿರುತ್ತೇನೆ. ಇಂತಹ ಮಹತ್ವದ ವಿಚಾರಗಳ ಅಧ್ಯಯನ ನಾವು ಹೊರಜಗತ್ತನ್ನು ಗ್ರಹಿಸುವ ನಮ್ಮ ಕ್ರಮವನ್ನು ಬದಲಾಯಿಸುತ್ತದೆ ಅನ್ನುವದರಲ್ಲಿ ಸಂಶಯವಿಲ್ಲ. ಆದರೆ ಹುಡುಗಿಯಾದ ನನಗೆ ಮನೆಯಲ್ಲಿ ನನ್ನ ಎಲ್ಲ ಕೆಲಸಗಳಲ್ಲಿ ಅಪ್ಪನ ಸಂಪೂರ್ಣ ಸಹಕಾರ ಸಿಗುತ್ತಿರುವುದರಿಂದ ಪಿತೃಪ್ರಾಧಾನ್ಯತೆಯ ನೇರ ಅನುಭವವಾಗಿಲ್ಲ ಎಂದು ಹೇಳಬಹುದು. ಅದರೂ, ಸುತ್ತ ಮಹಿಳೆಯ ಮೇಲೆ ನಡೆಯುತ್ತಿರುವ ದೌರ್ಜನ್ಯಗಳು ನನ್ನನ್ನು ಕಂಗಾಲಾಗಿಸುತ್ತವೆ. 21ರ ಹರೆಯಕ್ಕೆ ಕಾಲಿರಿಸಿ ವಯಸ್ಕರ ಜಗತ್ತನ್ನು ಸೇರುತ್ತಿರುವ ನಾನು, ಮಹಿಳಾವಾದದ ವಿವಿಧ ಆಯಾಮಗಳನ್ನು ಗುರುತಿಸುತ್ತ ನನ್ನ ಅನುಭವವನ್ನು ಅದರೊಂದಿಗೆ ಸಮೀಕರಿಸಿಕೊಳ್ಳಲು ಇಲ್ಲೊಂದು ಪುಟ್ಟ ಪ್ರಯತ್ನ ಮಾಡುತ್ತಿದ್ದೇನೆ.

ಕೆಲ ದಿನಗಳ ಹಿಂದೆ ನಾನು ನನ್ನ ಇಬ್ಬರು ಸ್ನೇಹಿತೆಯರೊಂದಿಗೆ ಕಾಫಿ ಹೌಸ್ ಒಂದಕ್ಕೆ ಹೋಗಿದ್ದೆ. ಕಾಫಿ ಪ್ರಿಯರಾದ ನಾವು ದಿನಕ್ಕೆ ಎರಡು ಮೂರು ಕಾಫಿ ಕುಡಿಯದಿದ್ದರೇ ಆದೀತೆ? ಕಾಫಿ ಸರಬರಾಜು ಮಾಡುವ ಕೌಂಟರ್ ಬಳಿ ಅತಿ ಹೆಚ್ಚು ಪುರುಷರು ಸೇರಿದ್ದರು. ಹೇಗೋ ನುಸುಳಿ ನಾನು ಕೌಂಟರ್ ಬಳಿ ತಲುಪಿದೆ ಮತ್ತು ಮೂರು ಕಾಫಿಗೆ ಆರ್ಡರ್ ಕೊಟ್ಟೆ. ಮೂರು ಕಾಫಿ ಕಪ್‌ಗಳನ್ನು ಅಲ್ಲಿನ ಸಿಬ್ಬಂದಿ ಒಟ್ಟೊಟ್ಟಿಗೆ ತಂದು ಇಟ್ಟಿದ್ದನೋ ಇಲ್ಲವೋ ಅಲ್ಲಿ ನೆರೆದ ಪುರುಷರ ಸಲಹೆ ಪ್ರಾರಂಭ' ಮೊದಲು ನಿಮ್ಮ ಸ್ನೇಹಿತೆಯನ್ನು ಇಲ್ಲಿಗೆ ಕರಿಯಿರಿ. ಅವರಿಗೆ ಒಂದು ಗ್ಲಾಸ್ ಹಸ್ತಾಂತರಿಸಿ, ಉಳಿದ ಎರಡು ಗ್ಲಾಸ್ ನೀವು ತೆಗೆದುಕೊಂಡಿ ಹೋಗಿ ಅಂತ. ಇವರ ಸಲಹೆ ಇಲ್ಲದಿದ್ದರೂ ನಾನು ಮಾಡುವುದು ಅದೇ ಆಗಿತ್ತು. ಮೂರು ಗ್ಲಾಸ್‌ಗಳನ್ನು ನಾನು ಒಟ್ಟಿಗೆ ತೆಗೆದುಕೊಂಡು ಹೋಗುವುದು ಅಸಾಧ್ಯವಾಗಿತ್ತು. ಅಲ್ಲದೇ ಬಹುಶಃ ನಾನು ಸಿಬ್ಬಂದಿ ಬಳಿ ಒಂದು ಪ್ಲೇಟ್ ಅಥವಾ ಟ್ರೇ ಇಸಿದುಕೊಂಡು ಅದರಲ್ಲಿ ಮೂರು ಕಾಫಿ ಕಪ್‌ಗಳನ್ನು ತೆಗೆದುಕೊಂಡು ಹೋಗುತ್ತಿದ್ದೆ. ಅದೇ ನನ್ನ ಜಾಗದಲ್ಲಿ ಗಂಡಸೇನಾದರೂ ಇದ್ದಿದ್ದರೆ ಇವರೆಲ್ಲ ಇಷ್ಟು ಸಲಹೆ ನೀಡುತ್ತಿದ್ದರೆ?

ಇನ್ನೊಮ್ಮೆ ನಾನು ಬಸ್‌ನಲ್ಲಿ ಪ್ರಯಾಣಿಸುತ್ತಿದ್ದೆ. ಕಿಟಕಿ ಬಳಿ ಸೀಟ್ ನನಗೆ ಸಿಕ್ಕಿತು. ಅಲ್ಲಿಂದ ಹೊರ ನೋಡುತ್ತಿರಬೇಕಾದರೆ ಅಲ್ಲಿ ಒಂದು ಸ್ಕೂಟರ್ ಬಂದು ನಿಂತಿತು. ಬಸ್ ಬಳಿ ನಿಂತಿದ್ದು ನೋಡಿದರೆ ಗಂಡ ಹೆಂಡತಿ, ಗಂಡ ತನ್ನ ಹೆಂಡತಿಯನ್ನು ಈ ಬಸ್‌ಗೆ ಬಿಡಲು ಬಂದಿದ್ದರು ಎಂದು ಹೊರನೋಟಕ್ಕೆ ಗೋಚರಿಸುವ ವಿಚಾರ. ಹೆಂಡತಿ ಗಂಡನ ಬಳಿ ದುಡ್ಡು ಕೇಳಿದಳು. ಗಂಡಸು ಪರ್ಸ್ ಏನೋ ಹೊರಗೆ ತೆಗೆದ. ಆದರೆ ಅವಳಿಗೆ ಹಣ ನೀಡುವ ಮೊದಲು ಅವಳ ಪರ್ಸ್ ತೆರೆದು ತೋರಿಸಲು ಹೇಳಿದ. ಆಕೆ ಪರ್ಸ್ ತೆರೆದು ತೋರಿಸಿದಾಗ ಪರ್ಸ್ ನಿಂದ 10 ರ 5 ನೋಟ ತೆಗೆದ ಆದರೆ ಹೆಂಡತಿಗೆ ಅದರಲ್ಲಿ 30 ರೂಪಾಯಿಯನ್ನೂ ಮಾತ್ರ ನೀಡಿದ. ಬಾಡಿದ ಮುಖದಿಂದ ಆ ಹೆಂಗಸು ಬಸ್ಸನ್ನು ಏರಿದಳು. ಏನೂ ಪ್ರಶ್ನಿಸದೆ ಆ ಗಂಡಸು ಆಕೆಗೆ ಹಣ ನೀಡಬಹುದಿತ್ತು. ಆತನ ಪರ್ಸ್‌ನಲ್ಲಿ ಸಾಕಷ್ಟು ಹಣ ಕೂಡ ಇತ್ತು. ಎಲ್ಲ ಗಂಡಸರು ಕೆಟ್ಟವರು ಅಥವಾ ಹೆಂಗಸಿಗೆ ಸಿಗಬೇಕಾದ ಸೂಕ್ತ ಸ್ಥಾನಮಾನ ಸಿಗುತ್ತಿಲ್ಲ ಅಂತ ನಾ ಹೇಳುತ್ತಿಲ್ಲ. ಯಾಕೆಂದರೆ ನಾನು ಬೆಳೆದು ಕಲಿಯುವುದು ಇನ್ನೂ ತುಂಬ ಇದೆ. ಆದರೆ ಈಗೀಗ ಅರ್ಥ ಆಗ್ತಾ ಇದೆ ಯಾಕೆ ನಮ್ಮ ಸರ್ ನಮಗೆ ಇನ್ನು ಮುಂದೆ ನೀವು ಕೆಟ್ಟ ಪ್ರಪಂಚ ಪ್ರವೇಶಿಸುತ್ತೀರಿ ಪುಟಾಣಿ ಹುಡುಗಿಯರೆ, ನೀವೆಲ್ಲ ನಿಮ್ಮ ಭವಿಷ್ಯತ್ತಿನಲ್ಲಿ ಬರುವ ಕಷ್ಟಗಳನ್ನು ಎದುರಿಸಲು ತಯಾರಾಗಿರಬೇಕು ಎಂದು ಹೇಳುವುದು. ❑

# ಸೌಗಂಧಿ ಯಾನೆ ಹೆಣ್ಣಿನ ಬದುಕು

■ ಸಾದತ್ ಹಸನ್ ಮಾಂಟೋ
ಅನುವಾದ: ಪಣಿರಾಜ್

*ದೇಶ ಮಾಂಟೋನ ಶತಮಾನೋತ್ಸವವನ್ನು ಆಚರಿಸುತ್ತಿದೆ. ಕೋಮು ವಿಷವನ್ನು ಉಂಡು ತನ್ನನ್ನು ಸೀಳಿಕೊಂಡ ಭಾರತ ಪಾಕಿಸ್ತಾನ ಎಂದಾದ ಭೂಭಾಗ ಅವನ ಮನಸ್ಸಿನ ಮೇಲೆ ಅದೆಷ್ಟು ಆಘಾತವನ್ನುಂಟು ಮಾಡಿತ್ತೆಂದರೆ ಸಹಜವಾಗಿ ಬದುಕುವುದು ಅವನಿಂದ ಅಸಾಧ್ಯವಾಗಿ ಹೋಯಿತು. ವಿಭಜನೆಯ ಕೆಂಪು ಹಿಂಪರದೆಯಲ್ಲಿ ಆತ ಮನುಷ್ಯನ ನೀಚತನ, ಪಾಶವಿಕತೆ ಇವೆಲ್ಲವನ್ನು ಚಿತ್ರಿಸುತ್ತಲೇ ಹೊರಟ. ಎಲ್ಲಕ್ಕಿಂತ ಮುಖ್ಯವಾಗಿ ಮಾಂಟೊ ಭೂಮಿಯನ್ನೂ ಹೆಣ್ಣನ್ನೂ ಒಂದಾಗಿ ನೋಡಿದ್ದ. ಹೆಣ್ಣಿನ ಮೇಲಿನ ಪ್ರಭುತ್ವದ ಆಕ್ರಮಣದ ಎಲ್ಲಾ ವಿನ್ಯಾಸಗಳನ್ನೂ ದಿಗ್ಭ್ರಮೆ ಹುಟ್ಟಿಸುವ ರೀತಿಯಲ್ಲಿ ಚಿತ್ರಿಸಿದ್ದ. ಅದರಲ್ಲೂ ಅವನ ಕಥನದ ಕೇಂದ್ರದಲ್ಲಿರುವವರು ಅಂಚಿನಲ್ಲಿರುವ, ಪರಿಧಿಯಲ್ಲಿರುವ, ಮಧ್ಯಮ ವರ್ಗದ ಪೊಳ್ಳು ನೈತಿಕತೆಯನ್ನು ಚುಚ್ಚುವ ಆದರೆ ಅಪಾರ ಅನುಕಂಪವನ್ನು, ಮಾನವೀಯತೆಯನ್ನು ಒಡಲಲ್ಲಿರಿಸಿಕೊಂಡ ಹೆಣ್ಣುಗಳು. ಹಾಗಾಗಿ ಮಾಂಟೊನ ಶತಮಾನೋತ್ಸವದ ಈ ಸಂದರ್ಭದಲ್ಲಿ ಅವನ ಕತೆಯ ಮರು ಓದು 'ನಮ್ಮ ಮಾನಸ'ಗೆ ಮುಖ್ಯ ಎಂದು ಅನ್ನಿಸುತ್ತದೆ.*





*ಚಿತ್ರಕೃಪೆ: ಶರತ್ ರಾಮ್*

ದಿನ ಪೂರ್ತಿ ಕಾಯಕದಿಂದ ಸುಸ್ತಾಗಿದ್ದವಳಿಗೆ ಹಾಸಿಗೆಗೆ ತಲೆ ಇಟ್ಟೊಡನೆ ನಿದ್ದೆ ಹತ್ತಿತ್ತು. ಇವಳು ಸೇಠ್ ಎಂದೇ ಕರೆಯುವ, ಕುಡಿದು ಟೈಟಾಗಿದ್ದ ನಗರ ಸಭೆಯ ಆರೋಗ್ಯಾಧಿಕಾರಿ ಈಗಷ್ಟೇ ಇವಳ ಮಗ್ಗುಲ ಬಿಟ್ಟು ಮನೆಗೆ ಹೋಗಿದ್ದ. ಆತ, ಎಂದಿನಂತೆ, ಇವಳ ಎಲುಬು ನಜ್ಜುಗುಜ್ಜಾಗುವ ಹಾಗೆ ಭೋಗಿಸಿ ಹೋಗಿದ್ದ. ತನ್ನನ್ನು ಹೆಂಡತಿ ಅತಿಯಾಗಿ ಹಚ್ಚಿಕೊಂಡಿದ್ದಾಳೆ ಎಂದು ಅವನೇ ಹೇಳುತ್ತಿದ್ದ; ಅವಳ ನೆನಪೊಂದು ಬರದಿದ್ದಲ್ಲಿ ಆತ ಇವಳ ಪಕ್ಕವೇ ಮಲಗಿರುತ್ತಿದ್ದ. ಅವಳ ಅಂದು ದುಡಿದಿದ್ದ ಬೆಳ್ಳಿ ನಾಣ್ಯಗಳನ್ನು ತನ್ನ ಬಾಡಿಯಡಿ ಭದ್ರವಾಗಿ ತೂರಿಸಿಟ್ಟುಕೊಂಡಿದ್ದಳು. ಎದೆ ಮೇಲೆ ಆರೋಗ್ಯಾಧಿಕಾರಿಯ ಮುತ್ತಿನ ಎಂಜಲ ಹಸಿ ಇನ್ನೂ ಹಾಗೆ ಉಳಿದಿತ್ತು. ನಿದ್ರೆಯಲ್ಲಿ ನಿಳಾ ಉಸಿರಾಡುವಾಗ ಬಾಡಿಯಡಿ ಹುದುಗಿಸಿಕೊಂಡಿದ್ದ ನಾಣ್ಯಗಳು ಕಿಣಿ ಕಿಣಿ ಎಂದು ಶಬ್ದ ಮಾಡುತ್ತಿದ್ದವು. ಮೊದಲು ಕುಡಿದ ಒಂದು ಕ್ವಾರ್ಟರ್ ಬ್ರಾಂಡಿ, ಅದು ಖಾಲಿಯಾದ ನಂತರ ನಲ್ಲಿ ನೀರನ್ನು ಬೆರೆಸಿಕೊಂಡು ಕುಡಿದ ಕಳ್ಳಭಟ್ಟಿಯಿಂದಾಗಿ ಅವಳ ಎದೆ ಉರಿಯುತ್ತಿತ್ತು. ಅವಳು ಅಗಲವಾದ ಕಟ್ಟಿಗೆ ಮಂಚದ ಮೇಲೆ ಬೋರಲಾಗಿ ಮಲಗಿದ್ದಳು. ದೇಹದ ಎರಡು ಬದಿ ಚಾಚಿದ್ದ ಅವಳ ಬೆತ್ತಲೆ ತೋಳುಗಳು ಪೇಪರು ಕಿತ್ತಿ ಹೋದ ಗಾಳಿಪಟದ ಹಂದರದಂತೆ ತೋರುತ್ತಿತ್ತು.

ಅದೊಂದು ಪುಟ್ಟ ಕೋಣೆ. ಅವಳ ಸಾಮಾನುಗಳು ಎಲ್ಲಾ ಕಡೆ ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡಿದ್ದವು. ಸವೆದು ಹೋದ ಮೂರ್ನಾಲ್ಕು ಜೊತೆ ಮೆಟ್ಟುಗಳು ಮಂಚದಡಿ ಬಿದ್ದುಕೊಂಡಿದ್ದವು; ಅವುಗಳ ಮೇಲೆ ತಲೆ ಇಟ್ಟು ನಾಯಿಯೊಂದು ಮಲಗಿತ್ತು. ಹರಕು ಬಣ್ಣಗಳ ಚರ್ಮದ ಆ ನಾಯಿ ದೂರದಿಂದ ಕಿತ್ತುಹೋದ ಕಾಲೊರೆಸುವ ಗೋಣಿ ಚಾಪೆ ಹಾಗೆ ಕಾಣುತ್ತ ಇತ್ತು. ಅವಳ ಶೃಂಗಾರ ಸಾಧನಗಳಾದ ಪೌಡರು, ಲಿಪ್‌ಸ್ಟಿಕ್ಕು, ಕೆನ್ನೆಗೆ ಹಚ್ಚೋ ಕೆಂಬಣ್ಣ, ಬಾಚಣಿಕೆ, ಹೇರ್ ಪಿನ್ನುಗಳು ಪುಟ್ಟ ಕಪಾಟಿನ ತುಂಬ ಹರಡಿಕೊಂಡಿದ್ದವು. ಹಸಿರು ಗಿಳಿ ಇದ್ದ ಪಂಜರವು ಸೂರಿನಿಂದ ಜೋತಾಡುತ್ತಿತ್ತು. ಕೊಕ್ಕನ್ನು ರೆಕ್ಕೆಗಳಡಿ ತೂರಿಸಿ ಗಿಳಿ ಮಲಗಿತ್ತು. ಪಂಜರದ ತುಂಬಾ ನೊಣ, ಸೊಳ್ಳೆಗಳು ಮುತ್ತಿಕೊಂಡ ಪೇರಳೆ ಕಾಯಿ ತುಂಡು, ಕಿತ್ತಳೆ ತೊಳೆಗಳು ಹರಡಿಕೊಂಡಿದ್ದವು. ಮಂಚದ ಪಕ್ಕ, ತಲೆ ಒರಗುವಲ್ಲಿ ಕಪ್ಪುಗಟ್ಟಿದ್ದ ಒಂದು ಬೆತ್ತದ ಕುರ್ಚಿ ಇತ್ತು. ಅದರ ಪಕ್ಕ ಪುಟ್ಟ ಮೇಜಿನ ಮೇಲೆ ಹಳೆಯ ಹೆಚ್.ಎಂ.ವಿ. ಗ್ರಾಮಫೋನು ಇತ್ತು. ಗೋಡೆಯ ಮೇಲೆ ನಾಲ್ಕು ಫೋಟೋಗಳನ್ನು ತೂಗು ಹಾಕಲಾಗಿತ್ತು.

ಅದರಲ್ಲಿ ಒಂದು ಗಣಪತಿಯ ಫೋಟೊ. ಕಮಾಯಿಯ ನಾಣ್ಯಗಳನ್ನು ಸಿಕ್ಕಕ್ಷಣವೇ ಗಣಪತಿಯ ಫೋಟೊಕ್ಕೆ ಉಜ್ಜಿ, ಬಾಡಿಯೊಳಗೆ ಜಾರಿಸುವುದು ಅವಳ ಅಭ್ಯಾಸ; ಹಾಗೆ ಮಾಡೋದರಿಂದ ಅದೃಷ್ಟ ಕುಲಾಯಿಸುತ್ತದೆ ಅನ್ನೋದು ಅವಳ ನಂಬಿಕೆ. ಆದರೆ, ಪೂನದಿಂದ ಮಧು ಬರುವವನಿದ್ದರೆ, ಅವಳು ಎಲ್ಲಾ ಕಾಸನ್ನೂ ಹಾಸಿಗೆಯಡಿ ಬಚ್ಚಿಡುತ್ತಿದ್ದಳು. ಪ್ರತಿ ಸಾರಿ ಬಂದಾಗಲೂ ಇವಳ ಕಮಾಯಿಯನ್ನೆಲ್ಲ ಮಧು ಕೊಳ್ಳೆ ಹೊಡೆದುಕೊಂಡು ಹೋಗುತ್ತಾನೆಂದು ಬಲ್ಲ ರಾಮಲಾಲ್, ಹೀಗೆ ಕಾಸು ಬಚ್ಚಿಡುವ ಉಪಾಯವನ್ನು ಅವಳಿಗೆ ಅರುಹಿದ್ದ. ಒಂದು ಸಾರಿ ರಾಮಲಾಲ್ ಅವಳಿಗೆ ಹೇಳಿದ್ದ– "ಈ ಬೋಳಿಮಗ ಎಲ್ಲಿ ಸಿಕ್ಕ ನಿಂಗೆ? ಎಂಥ ಪ್ರೇಮಿ ನಿನಗವನು? ವಾರ ವಾರ ಬರ್ತಾನೆ, ಪುಕ್ಕಸಟ್ಟೆ ನಿನ್ನನ್ನು ಭೋಗಿಸಿ ಹೋಗ್ತಾನೆ. ಅದೂ ಸಾಲದೇ ನೀನು ಕಷ್ಟಪಟ್ಟು ಕಮಾಯಿಸಿದ್ದನ್ನು ಎತ್ಕೊಂಡು ಹೋಗ್ತಾನೆ. ಸೌಗಂಧಿ, ಅಂಥದ್ದೇನು ಕಂಡಿಯವ್ವ ಈ ಬೋಳಿಮಗನಲ್ಲಿ, ಇಷ್ಟು ಹಚ್ಚಿಕೊಂಡುಬಿಟ್ಟೆ ಅವನನ್ನ? ಈ ತಲೆಹಿಡುಕ ಧಂದೆಯಲ್ಲಿ ಏಳು ವರ್ಷದಿಂದ ಇದ್ದೀನಿ. ನೀವೆಂಥ ಚೋಕ್ರಿಗಳು ಅಂತ ನಾನು ಚೆನ್ನಾಗೇ ಬಲ್ಲೆ. ಆದರೆ ಇದೊಂದು ಮಾತ್ರ ನಂಗೆ ನಿಜವಾಗ್ಲೂ ಅರ್ಥವಾಗ್ತಿಲ್ಲ ನೋಡವ್ವ."

ಮಜಾ ಮಾಡಲು ಹಾತೊರೆಯುವ ಗಂಡಸರನ್ನು ಗುರುತು ಹಚ್ಚಲು ರಾಮಲಾಲ್ ಬೀದಿ ಬೀದಿ ಠಳಾಯಿಸುತ್ತಿದ್ದ. ಅವನ ಸುಪರ್ದಿನಲ್ಲಿ, ರಾತ್ರಿಯೊಂದಕ್ಕೆ ಹತ್ತು ರೂಪಾಯಿಂದ ಹಿಡಿದು ನೂರು ರೂಪಾಯಿಗಳವರೆಗಿನ ಬೆಲೆ ಬಾಳುವ ತರಹಾವರಿ ಹೆಂಗಸರಿದ್ದರು. ಅವನು ಅವಳಿಗೆ ಮತ್ತೊಂದು ಸಾರಿ ಹೇಳಿದ್ದ? "ಸೌಗಂಧಿ, ನನ್ನ ಮಾತು ಕೇಳು. ಇವನನ್ನು ನೆಚ್ಚಿಕೊಂಡು ನಿನ್ನ ವ್ಯಾಪಾರ ಹಾಳು ಮಾಡಿಕೊಳ್ಳಬೇಡ. ಹುಷಾರಿರು, ಯಾಮಾರಿಸಿ ನಿನ್ನ ಮೈಮೇಲಿನ ಬಟ್ಟೆಯನ್ನೂ ಕಿತ್ತುಕೊಂಡು ಹೋಗೋ ಕೇಡಿ ನನ್ಮಗ ಅವನು. ಕಾಸನ್ನು ಹಾಸಿಗೆಯಡಿ ಬಚ್ಚಿಡು. 'ನಿನ್ನ ಮೇಲೆ ಆಣೆ ಮಾಡಿ ಹೇಳ್ತೀನಿ, ನನ್ನ ಹತ್ರ ಒಂದು ಕಿಲುಬೂ ಕಾಸೂ ಇಲ್ಲ. ಇವತ್ತು ಊಟಕ್ಕೂ ಗತಿ ಇಲ್ಲದೆ ಹಸಿದುಕೊಂಡಿದ್ದೇನೆ. ಬೀದಿ ಆಚೆಯ ಇರಾನಿ ಹೋಟೆಲಿಂದ ತಿನ್ನೋಕೆ ಏನಾದ್ರು ತಿಂಡಿ ಮತ್ತೊಂದು ಕಪ್ಪು ಚಹ ತಂದು ಕೊಡ್ತೀಯ' ಅಂತ ಕೇಳು."

"ನೋಡು ರಾಣಿ ಇದು ಕೆಟ್ಟ ಕಾಲ. ಈ ಕಾಂಗ್ರೆಸ್ಸ್ ಸರ್ಕಾರ ಬೋಳಿಮಗಂದು ಶರಾಬಿಗೆ ಬಹಿಷ್ಕಾರ ಹಾಕಿರೋದ್ರಿಂದ ಬಜಾರು ತಣ್ಣಗಾಗೋಗಿದೆ. ನಿಂಗೆ ಒಂದೆರಡು ತೊಟ್ಟು ಹೇಗಾದ್ರು ಸಿಗ್ತಾನೇ ಇರೋದ್ರಿಂದ ಹೊರಗಿನ ಕಷ್ಟ ಗೊತ್ತಾಗಲ್ಲ. ದೇವರ ಮೇಲೆ ಆಣೆ ಮಾಡಿ ಹೇಳ್ತಿನಿ, ನಿನ್ನ ಕೋಣೆಯಲ್ಲಿ ಶರಾಬಿನ ಖಾಲಿ ಬಾಟ್ಲಿ ಕಂಡಾಗೆಲ್ಲ, ನಾನಾದ್ರೂ ನಿನ್ನ ಜಾಗದಲ್ಲಿ ಇರಬಾರದಿತ್ತ ಅಂತ ಕರುಬ್ತೀನಿ ಕಣೆ" ಅಂತಾನೆ ರಾಮಲಾಲ್.

ರಾಮ್‌ಲಾಲನಿಗೆ ಮಾತ್ರ ಏನು, ಸೌಗಂಧಿಗೂ ಇನ್ನೊಬ್ರಿಗೆ ಸಲಹೆ ಕೊಡೋದು ಇಷ್ಟ. ಅವಳು ತನ್ನ ಗೆಳತಿ ಜಮುನಾಗೆ ಒಂದು ಸಾರಿ ಹೇಳಿದ್ದಳು–"ನನ್ನ ಮಾತು ಕೇಳು. ಹತ್ತು ರೂಪಾಯಿ ಕೊಟ್ಟು ಗಂಡಸ್ರು ನಿನ್ನ ಕೋಳಿ ಮಾಂಸ ಜಗದಂಗೆ ಜಗದು ಹಾಕ್ತಾರೆ. ನನ್ನ ನೋಡು. ಯಾವನಾದ್ರು ಮುಟ್ಟಬಾರದಲ್ಲಿ ಮುಟ್ಟಿದ ಅಂದ್ರೆ ಯಾಕಾದ್ರು ಹುಟ್ಟಿದೆ ಅನ್ನೋ ಹಂಗೆ ಮಾಡಿಬಿಡ್ತೀನಿ. ನಿನ್ನೆ ಏನಾಯ್ತು ಗೊತ್ತ? ಬೆಳಗ್ಗೆ ಎರಡು ಗಂಟೆ ಹೊತ್ತಿಗೆ ರಾಮ್‌ಲಾಲ್ ಒಬ್ಬ ಪಂಜಾಬಿನ ಕರ್ಕೊಂಡು ಬಂದ. ಇಬ್ರು ಹಾಸಿಗೆಗೆ ಹೋಗೋವಾಗ ನಾನು ದೀಪ ಆರಿಸಿದೆ. ಆಣೆ ಮಾಡಿ ಹೇಳ್ತೀನಿ ಜಮುನಾ, ಅವನು ಹೆದರಿಕೊಂಡುಬಿಟ್ಟ! ಏನು ಮಾಡೋಕೆ ಆಗ್ತಿಲ್ಲ ಅವನಿಗೆ! 'ಶುರುವಚ್ಕೋ, ಆಗಲೇ ಎರಡಾಗಿದೆ, ಬೇಕೊ ಬೇಡ್ವೋ' ಅಂದೆ ಕಣೆ. ಲೈಟು ಹಾಕು ಸಾಕು ಅಂತಾನೆ! ನಂಗೆ ಜೋರು ನಗು ಬಂತು. 'ಲೈಟುಗಿಯ್ಟು ಹಾಕಲ್ಲಯ್ಯ' ಅಂತ ಕಿಚ್ಚಾಯಿಸಿದೆ. ನಂತರ ಅವನನ್ನ ಚೂಟಿದೆ ನೋಡು, ಹೌಹಾರಿ ಮಂಚದಿಂದ ಜಿಗಿದು ಹೋಗಿ ಲೈಟ್ ಹಾಕ್ತು ಪ್ರಾಣಿ. 'ಯೋ! ತಲೆನೆಟ್ಟಗಿಲ್ವಾ' ಅಂದು ಲೈಟ್ ಆರಿಸಿದೆ. ಮತ್ತೆ ನಡುಗೋದಕ್ಕೆ ಶುರುಮಾಡಿದ. ಒಳ್ಳೆ ತಮಾಷೆಯಾಗಿತ್ತು ಕಣೆ. ಲೈಟು ಹಾಕೋದು–ಆರಿಸೋದು, ಆರಿಸೋದು– ಹಾಕೋದು. ಬೆಳಗಿನ ಮೊದಲ ಟ್ರ್ಯಾಮ್ ಕಾರ್ ಸದ್ದು ಕೇಳಿದವನೆ ಆ ಗಂಡಸು ಬಟ್ಟೆ ಹಾಕ್ಕೊಂಡು ಓಡೋದ. ಕಳ್ಳ ನನ್ಮಗ ಜೂಜಲ್ಲಿ ಹಣ ಗೆದ್ಕೊಂಡು ಬಂದಿದ್ದ ಅಂತಾ ಕಾಣುತ್ತೆ, ಇಲ್ಲಿ ಹಿಂಗೆ ಖರ್ಚು ಮಾಡಿದ. ನೋಡು ಜಮುನಾ ನೀನು ಏನು ಅರಿಯದೋಳು. ನನ್ನ ಮಾತು ಕೇಳು, ನಂಗೆ ಗಂಡಸರನ್ನು ಹದ್ದುಬಸ್ತಿನಲ್ಲಿಡೋದು ಹೇಗೆ ಅಂತ ಗೊತ್ತು ಕಣೆ."

ಅವಳಿಗೆ ಗಿರಾಕಿಗಳನ್ನು ಹದ್ದುಬಸ್ತಿನಲ್ಲಿ ಇಡೋದು ಗೊತ್ತಿತ್ತು ಅನ್ನೋದು ನಿಜವೆ. ಅವಳು ಅಂತಹ ಅನೇಕ ವರಸೆಗಳನ್ನು ಗೆಳತಿಯರಿಗೆ ಹೇಳುತ್ತ ಇದ್ದಳು: "ಗಿರಾಕಿ ನಡುವಳಿಕೆಯಲ್ಲಿ ಸಭ್ಯಸ್ಥನಾಗಿದ್ರೆ, ಪ್ರೇಮದ ಆಟ ಆಡು, ಚೆಂದದ ಮಾತಾಡು, ಚುಡಾಯಿಸು, ಮೈಮೇಲೆ ಕೈಯಾಡಿಸು. ಗಡ್ಡ ಇದ್ರೆ, ನಿನ್ನ ಬೆರಳಿಂದ ಬಾಚು, ಬಾಚುತ್ತ ಒಂದೆರಡು ಕೂದಲು ಕಿತ್ತಿ ಕಿಚಾಯಿಸು. ದಪ್ಪ ಗಂಡಸಾಗಿದ್ರೆ, ಠೊಣಪ ಅಂತ ರೇಗಿಸು. ಮಾಡೋ ಕೆಲಸಕ್ಕೆ ಅವಕಾಶ ಸಿಗದ ಹಾಗೆ ಹೀಗೆ ಆಟ ಆಡಿಸ್ತಾ ಕಾಲ ತಳ್ಳು. ಅವರೂ ಹೋಗೋವಾಗ ಖುಷಿಯಾಗಿ ಹೋಗ್ತಾರೆ, ನಿನ್ನ ಮೈಯೂ ನೋವಾಗದೆ ಉಳಿಯುತ್ತೆ. ಈ ಸಭ್ಯಸ್ಥ ಜನರ ಬಗ್ಗೆ ಎಚ್ಚರ ಇರಬೇಕು ಕಣ್ರೆ, ಅವರು ಕೆಲಸದಲ್ಲಿ ತುಂಬಾ ಒರಟರು ಗೊತ್ತಾ!"

ಆದರೆ ಸೌಗಂಧಿ ಅವಳು ಕೊಚ್ಚಿಕೊಳ್ಳೋಷ್ಟು ಜಾಣೆ ಏನಲ್ಲ. ಅವಳ ಬಳಿ ಬರೋ ಗಿರಾಕಿಗಳ ಸಂಖ್ಯೆಯೂ ದೊಡ್ಡದೇನಲ್ಲ. ಗಂಡಸರ ಸಂಗ ಅವಳಿಗೆ ಇಷ್ಟ; ಹೀಗಾಗಿ ಅವಳ ಜಾಣ ವರಸೆಗಳು ಯಾವೂ ತಕ್ಕ ಸಮಯದಲ್ಲಿ ಬಳಕೆಯಾಗುತ್ತಿರಲಿಲ್ಲ. ಅಕ್ಕರೆಯ ಒಂದೆರಡು

ಮಾತುಗಳನ್ನು ನಾಜೂಕಾಗಿ ಕಿವಿಯಲ್ಲಿ ಉಸುರಿದರೆ ಸಾಕು, ಅವಳು ಕರಗಿ ನೀರಾಗುವಳು. ದೇಹದ ಸುಖದಲ್ಲಿ ಏನು ಇಲ್ಲ ಅಂತ ಅವಳಿಗೆ ಗೊತ್ತಿದ್ದರೂ, ದೇಹ ಅವಳ ಹಿಡಿತದಲ್ಲಿ ಇರುತ್ತಿರಲಿಲ್ಲ. ಮಣಿಯುವುದು, ದಣಿಯುವುದು ಅವಳಿಗೆ ಮುದ ನೀಡುತ್ತಿತ್ತು.

ಅವಳು ಚಿಕ್ಕವಳಿದ್ದಾಗ, ಕಣ್ಣಾಮುಚ್ಚಾಲೆ ಆಡೋವಾಗ, ತಂದೆಯ ಮನೆಯಲ್ಲಿ ಮೂಲೆಯೊಂದರಲ್ಲಿದ್ದ ದೊಡ್ಡ ಕಟ್ಟಿಗೆ ಕಪಾಟಿನ ಒಳಗೆ ಅಡಗಿ ಕೂಡುವಳು. ಸಿಕ್ಕುಬಿಟ್ಟೆನೆಂಬ ಹೆದರಿಕೆ, ಸಿಗದೆ ಕಾಡುವೆನೆಂಬ ಮಜಾ ಎರಡೂ ಒಟ್ಟಾಗಿ ಅವಳ ಎದೆ ಜೋರಾಗಿ ಹೊಡೆದು ಕೊಳ್ಳೋದು. ಯಾರಿಗೂ ಸಿಗದಂತಹ ಒಂದು ಡಬ್ಬಿಯಲ್ಲಿ, ಯಾರಾದರೂ ಹುಡುಕಿ ಕಂಡುಹಿಡಿಯಲಿ ಎಂಬ ಹಂಬಲದಲ್ಲಿ ಇಡಿ ಬದುಕು ಕಳಿಬೇಕು ಅಂತ ಅವಳಿಗೆ ಒಂದೊಂದು ಸಾರಿ ಅನಿಸೋದು. ಕಳೆದ ಐದು ವರ್ಷಗಳ ಅವಳ ಜೀವನವಂತೂ ಒಂದು ಕಣ್ಣುಮುಚ್ಚಾಲೆ ಆಟವೇ ಆಗಿತ್ತು. ಒಂದೋ ಯಾರನ್ನಾದರೂ ಅವಳು ಹುಡುಕುವಳು ಇಲ್ಲವೇ ಯಾರೋ ಅವಳನ್ನರಿಸುವರು. ಯಾವನಾದ್ರು ಗಂಡಸು ಬಂದು 'ಸೌಗಂಧಿ ನಾನು ನಿನ್ನ ಪ್ರೀತಿಸ್ತೇನೆ ಕಣೆ' ಅಂದ್ರೆ ಸಾಕು, ಅವನು ಕಪಟಿ ಅಂತ ಗೊತ್ತಿದ್ರು, ಅವಳ ಜಂಗಾಬಲ ಕುಸಿಯುವುದು. ಪ್ರೇಮ! ಬಲು ಸುಂದರವಾದ ಪದ ಎಂದು ಅವಳಿಗೆ ಅನ್ನಿಸುವುದು. ಓಹ್! ಮುಲಾಮಿನ ಹಾಗೆ ಪ್ರೇಮವನ್ನೂ ದೇಹಕ್ಕೆ ಹಚ್ಚುವಂತಿದ್ದರೆ ಎಷ್ಟು ಚೆನ್ನಾಗಿತ್ತು! ತನ್ನ ಖಾಯಂ ಗಿರಾಕಿಗಳಲ್ಲಿ ನಾಲ್ಕು ಜನ ಅವಳಿಗೆ ಪ್ರಿಯವಾಗಿದ್ದರು. ಅವರ ಕಟ್ಟು ಹಾಕಿದ ಫೋಟೊಗಳನ್ನು ಅವಳು ತನ್ನ ಕೋಣೆಯ ಗೋಡೆಗೆ ತೂಗು ಹಾಕಿಕೊಂಡಿದ್ದಳು.

ಕಳೆದ ಐದು ವರ್ಷಗಳನ್ನು ಅವಳು ಉತ್ಕಟವಾಗಿ ಬದುಕಿದ್ದಳು. ಬಯಸಿದಷ್ಟು ಸುಖ ದೊರಕಿರಲಿಲ್ಲ ಅನ್ನೋದು ನಿಜವಾದರೂ, ದಕ್ಕಿದಷ್ಟರಲ್ಲೇ ಅವಳು ಖುಷಿಪಟ್ಟಿದ್ದಳು. ಹಣ ಗಳಿಸುವ ಆಸೆ ಅವಳಿಗೆ ಇರಲಿಲ್ಲ. ಒಂದು ಸಾರಿಯ ಸೇವೆಗೆ ಅವಲ ಬೆಲೆ ಹತ್ತು ರೂಪಾಯಿ. ಅದರಲ್ಲಿ ಕಾಲು ಭಾಗ ರಾಮ್‌ಲಾಲನ ಪಾಲು. ಮಿಕ್ಕಿದ್ದು ಅವಳ ಬದುಕಿಗೆ ಸಾಕಾಗಿತ್ತು. ಮಧು ಪೂನದಿಂದ ಬಂದಾಗ ಅವನ ಉಪಚಾರಕ್ಕೆ ಹತ್ತು ಹದಿನೈದು ರೂಪಾಯಿಯನ್ನು ಅವಳು ಖುಷಿಯಿಂದ ಖರ್ಚು ಮಾಡುತ್ತಿದ್ದಳು. ಇದು, 'ಅವನಲ್ಲಿ ಏನು ಕಂಡೆ' ಅಂತ ರಾಮ್‌ಲಾಲ್ ಕೇಳಿದ್ದನ್ನಲ್ಲ, ಆ ಭಾವಕ್ಕಾಗಿ ಅವಳು ತೆತ್ತ ಬೆಲೆಯಾಗಿತ್ತೇನೋ.

ಹೌದು, ಸೌಗಂಧಿಗೆ ಇಷ್ಟವಾಗುವಂಥದ್ದು ಏನೋ ಮಧುವಿನಲ್ಲಿ ಇತ್ತು. ಅವರಿಬ್ಬರ ಮೊದಲ ಭೇಟಿಯಲ್ಲೇ ಮಧು ಹೇಳಿದ್ದು: "ಬೆಲೆವೆಣ್ಣಾಗಿ ಬದುಕುವುದಕ್ಕೆ ನಿನಗೆ ನಾಚಿಕೆಯಾಗೋದಿಲ್ವೆ? ನಿನ್ನ ಬೆಲೆ ಹತ್ತು ರೂಪಾಯಿ. ಅದರಲ್ಲಿ ಕಾಲುಪಾಲು ರಾಮ್‌ಲಾಲ್‌ಗೆ ಹೋಗುತ್ತೆ. ಮಿಕ್ಕೋದು ಏಳು ರೂಪಾಯಿ ಎಂಟಾಣೆ ಅಲ್ಲವ? ಆ ಬಿಡಿಗಾಸಿಗೆ ನಿನಗೊಲ್ಲದ್ದನ್ನ ನೀನು ಮಾಡ್ತಿಯ. ನನ್ನ ಕತೆ ಏನು? ಸಿಗಲಾರದ್ದನ್ನ ಹುಡುಕಿಕೊಂಡು ಬಂದಿದ್ದೀನಿ ನಾನು. ನಂಗೆ ಒಬ್ಬಳು ಹೆಣ್ಣು ಬೇಕು, ನಿಂಗೂ ಒಬ್ಬ ಗಂಡು ಬೇಕು ಅಲ್ಲವ? ನನಗೆ ಯಾವ ಹೆಣ್ಣಾದರೂ ಆದೀತು, ನಿಂಗೆ ಯಾವ ಗಂಡಾದರೂ ಆದೀತಾ? ನಮ್ಮಿಬ್ಬರ ನಡುವೆ ಈ ಹತ್ತು ರೂಪಾಯಿ ವ್ಯವಹಾರ ಬಿಟ್ಟರೆ ಏನಿದೆ. ಅದರಲ್ಲಿ ಕಾಲು ಪಾಲು ಆ ರಾಮ್‌ಲಾಲಗೆ ದಕ್ಕುತ್ತೆ. ಆದರೆ ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದೇವೆ. ಅದನ್ನು ಹೇಗಾದರು ಬಗೆ ಹರಿಸಬಾರದ? ಆ ಬಗೆಯಲ್ಲಾದರೂ ನಮ್ಮ ನಮ್ಮ ಆಸೆಗಳನ್ನು ಪೂರೈಸಿಕೊಳ್ಳಬಹುದು. ಒಂಚೂರು ಕೇಳು. ನಾನು ಪೂನದಲ್ಲಿ ಪೊಲೀಸ್ ಸಾರ್ಜೆಂಟ್ ಆಗಿದ್ದೇನೆ. ತಿಂಗಳಿಗೊಮ್ಮೆ ಬಂದು ನಾಲ್ಕೈದು ದಿನ ಇದ್ದು ಹೋಗುತ್ತೇನೆ. ಇನ್ನು ಮೇಲೆ ನೀನು ದಂಧೆ ಮಾಡಬೇಕಾಗಿಲ್ಲ. ನಿನ್ನನ್ನ ನಾನು ನೋಡ್ಕೊಳ್ತೇನೆ. ಈ ನಿನ್ನ ಕೋಣೆಗೆ ಎಷ್ಟಂತೆ ಬಾಡಿಗೆ?"

ಪೊಲೀಸ್ ಸಾರ್ಜೆಂಟನೊಬ್ಬನ ಮುದ್ದಿನ ಹೆಣ್ಣು ಎಂಬ ಭಾವನೆಯನ್ನು ಮಧು ಅವಳಲ್ಲಿ ತುಂಬಿದ್ದ. ಅವಳ ಕೋಣೆಯ ರೂಪವನ್ನೂ ಅವನು ಬದಲಾಯಿಸಿದ್ದ. ಅರೆನಗ್ನ ಹೆಣ್ಣುಗಳ ಪೋಸ್ಟರುಗಳನ್ನು ಅವಳು ಗೋಡೆಗೆ ಅಂಟಿಸಿದ್ದಳು. ಅವನು ಅವುಗಳನ್ನು ಅವಳನ್ನು ಕೇಳದೆ ಕಿತ್ತಿ ಹರಿದು ಬಿಸಾಡಿದ್ದ. "ನನ್ನ ಮುದ್ದು ಸೌಗಂಧಿ ಇದೆಲ್ಲ ನಂಗೆ ಸರಿ ಬರೋದಿಲ್ಲ. ಈ ಕೊಳಕು ಹೂಜಿಯನ್ನು ನೋಡು. ಅದನ್ನು ತೊಳೆದು ಸ್ವಚ್ಛ ಮಾಡಬಾರದೆ. ಮತ್ತೇ ಅದೇನು ಅಲ್ಲಿ ಬಿದ್ದುಕೊಂಡಿರೊ ಕೊಳಕು ಚಿಂದಿ ಬಟ್ಟೆಗಳು; ಆಚೆ ತೆಗೆದೆಸೆಯಬಾರದೆ? ತಲೆ ಸ್ನಾನ ಮಾಡಿ ಎಷ್ಟು ದಿನವಾಯಿತೆ; ನೋಡು ಕೂದಲು ಹೇಗೆ ಜಡೆಗಟ್ಟಿದೆ...ಮತ್ತೇ...ಮತ್ತೇ..." ಹೀಗೆ ಅವನ ಹುಕುಂ ನಡೆದಿತ್ತು.

ಮೊದಲ ಭೇಟಿಯ ಮೂರು ತಾಸಿನ ಮಾತುಕತೆಯಲ್ಲಿ, ಬಹುಪಾಲು ಮಧುವಿನ ಮಾತೇ ಇತ್ತು. ಆದರೂ ಸೌಗಂಧಿಗೆ ಆತನ ಜೊತೆ ತನಗೆ ಬಹುಕಾಲದ ಸಂಬಂಧವಿದೆ ಎಂಬ ಭಾವನೆ ಮೂಡಿತ್ತು. ಹಿಂದೆಂದೂ ಯಾರು ಆ ಬಗೆಯಲ್ಲಿ ಅವಳ ಜೊತೆ ಮಾತಾಡಿರಲಿಲ್ಲ, ಆ ಕೋಣೆ ಅವಳ ಮನೆ ಎಂಬ ಭಾವನೆ ಹುಟ್ಟಿಸಿರಲಿಲ್ಲ. ಅವಳ ಸಂಗ ಮಲಗಲು ಬಂದ ಗಂಡಸರು ಯಾರೂ ಹಾಸಿಗೆ ಮೇಲಿನ ಬೆಡ್ ಷೀಟು ಕೊಳಕಾಗಿದೆ ಅನ್ನೋದನ್ನೂ ಗಮನಿಸಿರಲಿಲ್ಲ. ಎಂದೂ ಯಾರೂ ಅವಳಿಗೆ "ನಿನಗೆ ಶೀತವಾಗಿರುವಂತಿದೆ. ಮದ್ದಿನ ವ್ಯವಸ್ಥೆ ಮಾಡುತ್ತೇನೆ ತಾಳು" ಎಂಬ ಸಾಂತ್ವನದ ಮಾತುಗಳನ್ನು ಆಡಿರಲಿಲ್ಲ. ಮಧು ಎಲ್ಲರಿಗಿಂತ ಬೇರೆಯಾಗಿದ್ದ; ಯಾರೂ ಅವಳ ಜೊತೆ ಆಡದಂತಹ ಮಾತುಗಳನ್ನು ಆಡಿದ್ದ. ಅವನು ತನಗೆ ಬೇಕಾದವನು ಎಂದು ಅವಳಿಗೆ ಅನಿಸಿಬಿಟ್ಟಿತ್ತು.

ಅವನು ತಿಂಗಳಿಗೊಮ್ಮೆ ಬರುತ್ತಿದ್ದ. ಹೋಗುವ ಮುಂಚೆ "ಸೌಗಂಧಿ, ನೋಡು ನೀನು ನಿನ್ನ ಹಳೆ ದಂಧೆ ಶುರುಮಾಡಿಕೊಂಡರೆ, ನನ್ನನ್ನು ಕಳೆದುಕೊಳ್ಳುತ್ತೀಯ. ನಿನ್ನ ತಿಂಗಳ ಖರ್ಚನ್ನು ಪೂನೆಗೆ ಹೋದಾಕ್ಷಣವೆ ಕಳಿಸುವೆ." ಎಂದು ಹೇಳಿ ಹೋಗುವನು.

ಮಧು ಎಂದೂ ಅವಳಿಗೆ ಹಣ ಕಳಿಸಲಿಲ್ಲ. ಅವಳು ತನ್ನಪಾಡಿಗೆ ತನ್ನ ದಂಧೆ ಮುಂದುವರೆಸಿಕೊಂಡು ಹೋದಳು. ಅವಳೆಂದೂ ಅವನಿಗೆ "ಇಂಥ ಉದ್ರಿ ಮಾತೆಲ್ಲ ಬೇಡ. ಯಾವತ್ತಾದ್ರೂ ಕವಡೆ ಕಾಸು ಕಳಿಸಿದೀಯ ಹೇಳು" ಎಂದು ಕೇಳಲಿಲ್ಲ. ಅವನೂ, ಹೊಟ್ಟೆ ಪಾಡಿಗೆ ಏನು ಮಾಡುತ್ತಿದ್ದೀಯ ಅಂತ ಅವಳನ್ನು ಕೇಳಲಿಲ್ಲ. ಇದು ನಟನೆ ಎಂದು ಇಬ್ಬರಿಗೂ ಗೊತ್ತಿತ್ತು. ಹಾಗಿರುವುದೇ ಇಬ್ಬರಿಗೂ ಸುಖವೆನಿಸಿತ್ತು. ಒಂದೊಂದು ಸಾರಿ ಸೌಗಂಧಿ ತನ್ನ ಜೊತೆ ತಾನೇ ವಾದ ಮಾಡಿಕೊಳ್ಳೋಳು. ಅಪ್ಪಟ ಚಿನ್ನ ಕೊಳ್ಳಲಾಗದೆ ಇರುವಾಗ ಗಿಲೀಟು ಬಂಗಾರದಲ್ಲೇ ಯಾಕೆ ತೃಪ್ತಿ ಪಡಬಾರದು.

ಆದರೆ ಈಗ ಅವಳು ಗಾಢ ನಿದ್ರೆಯಲ್ಲಿದ್ದಳು. ಮಂಚದ ಮೇಲೆ ಕಣ್ಣಿಗೆ ಕುಕ್ಕುವ ಹಾಗೆ ಉರಿಯುತ್ತಿದ್ದ ಲೈಟನ್ನು ಆರಿಸುವ ವ್ಯವಧಾನ ಇಲ್ಲದಷ್ಟು ಅವಳು ದಣಿದಿದ್ದಳು.

ಯಾರೋ ಅವಳ ಕೋಣೆಯ ಬಾಗಿಲು ತಟ್ಟುತ್ತಿದ್ದರು. ಆ ಸದ್ದು ಅವಳಿಗೆ ಎಲ್ಲೋ ದೂರದಿಂದ ಬರುತ್ತಿರುವಂತೆ ಕ್ಷೀಣವಾಗಿ ಕೇಳುತ್ತಿತ್ತು. ಈಗ ಬಾಗಿಲನ್ನು ದಬ ದಬನೆ ಬಡಿಯುತ್ತಿದ್ದರು. ಅವಳಿಗೆ ಎಚ್ಚರಾಗಿ ಎದ್ದು ಕೂತಳು. ಕಳಪೆ ಶರಾಬಿನ ಕಹಿ ಉಳಿದಿದ್ದ, ಜೊಲ್ಲು ಬಾಯನ್ನು ಒರೆಸಿಕೊಂಡಳು. ಮಂಚದಡಿ ನೋಡಿದಳು, ನಾಯಿ ಅವಳ ಹಳೆ ಮೆಟ್ಟಿಗೆ ತಲೆಯೊರಗಿಸಿ ಮಲಗಿತ್ತು. ಗಿಳಿಯೂ ತನ್ನ ಕೊಕ್ಕನ್ನು ರೆಕ್ಕೆಯಡಿ ತುರುಕಿಕೊಂಡು, ಪಂಜರದೊಳಿತ್ತು.

ಮತ್ತೊಮ್ಮೆ ಅಸಹನೆಯ ಬಾಗಿಲು ಬಡಿತ. ಅವಳು ಹಾಸಿಗೆ ಬಿಟ್ಟು ಎದ್ದಳು. ತಲೆ ವಿಪರೀತ ಸಿಡಿಯುತ್ತಿತ್ತು. ಹೂಜಿಯಿಂದ ಒಂಚೂರು ನೀರು ಬಾಯಿಗೆ ಹಾಕಿಕೊಂಡು ಮುಕ್ಕಳಿಸಿ ಕುಡಿದಳು. ಮತ್ತೊಂದು ಲೋಟ ಬಗ್ಗಿಸಿಕೊಂಡು ಒಂದೇ ಗುಟುಕಿಗೆ ಕುಡಿದಳು. ಅನುಮಾನದಿಂದ ಬಾಗಿಲು ತೆಗೆದು 'ರಾಮ್‌ಲಾಲ್?' ಎಂದು ಪಿಸುಗುಟ್ಟಿದಳು.

ಬಾಗಿಲು ಬಡಿ ಬಡಿದು ರೋಸಿ ವಾಪಸು ಹೋಗುವವನಿದ್ದ ರಾಮ್‌ಲಾಲ್ ರೇಗಿ "ಹಾವು ಕಚ್ಚಿದೋರ ಹಾಗೆ ಬಿದ್ಕೋಂಡಿಯಲ್ಲ. ಒಂದು ತಾಸಿನಿಂದ ಬಾಗಿಲು ಬಡಿತ್ತಿದ್ದೀನಿ, ಕೇಳಲ್ವ?" ಅಂದ. ಮತ್ತೆ ಧ್ವನಿ ತಗ್ಗಿಸಿ ಕೇಳಿದ–"ಯಾವದಾದ್ರು ಗಿರಾಕಿ ಇದೆಯಾ?" ಅವಳು ಇಲ್ಲವೆಂದು ಗೋಣಾಡಿಸಿ ಅವನನ್ನು ಒಳಗೆ ಬಿಟ್ಟುಕೊಂಡಳು. "ನಿಮ್ಮನ್ನ ಹಾಸಿಗೆಯಿಂದ ಎಬ್ಬಿಸೋಕೆ ಒಂದು ತಾಸು ಒದ್ದಾಡಬೇಕು ಅಂದಾದ್ರೆ ನಾನು ಬೇರೆ ದಂಧೆ ನೋಡ್ಕೋಳೊದೆ ವಾಸಿ ಅಂತ ಕಾಣುತ್ತೆ. ಏನು ಹೆಂಗಸ್ರೋ ನೀವು. ನನ್ನ ಮುಖ ಏನು ನೋಡ್ತಾ ನಿಂತಿದೀಯ? ಹೋಗು ಹೂವಿನ ಚಿತ್ತಾರ ಇರೋ ಒಳ್ಳೆ ಸೀರೆ ಉಟ್ಕೊಂಡು, ಮುಖಕ್ಕೆ ಪೌಡರ್ ಮೆತ್ಕೊಂಡು, ತುಟಿಗೆ ಲಿಪ್ಸ್ಟಿಕ್ ಬಳ್ಕೊಂಡು ತಯಾರಾಗು. ಹೊರಗೆ ಕಾರಲ್ಲಿ ಸಾವಕಾರ ಸೇಠುಗಳು ನಿಂಗೋಸ್ಕರ ಕಾಯ್ತ ಇದ್ದಾರೆ" ಎಂದ ರಾಮ್‌ಲಾಲ್.

ಅವನ ಅವಸರ ಲೆಕ್ಕಕ್ಕಿಲ್ಲವೆಂಬಂತೆ ಸೌಗಂಧಿ ಹೋಗಿ ಬೆತ್ತದ ಖುರ್ಚಿಯಲ್ಲಿ ಹೋಗಿ ಕುಸಿದಳು. ತಲೆನೋವಿನ ಮುಲಾಮಿನ ಬಾಟ್ಲಿ ಕೈಗೆತ್ತಿಕೊಂಡು ಮುಚ್ಚಳ ತೆಗೆಯುತ್ತ "ರಾಮ್‌ಲಾಲ್ ನಂಗೆ ಹುಷಾರಿಲ್ಲ" ಎಂದಳು.

"ಮೊದ್ಲೆ ಹೇಳೋಕೆ ಏನಾಗಿತ್ತು ನಿಂಗೆ?"

ತಲೆನೋವಿನ ಮುಲಾಮನ್ನು ಹಣೆಗೆ ನೀವಿಕೊಳ್ಳುತ್ತ ಅವಳು "ನಂಗೆ ಹುಷಾರಿಲ್ಲ ಅಂದೆನಲ್ಲ. ಜಾಸ್ತಿ ಕುಡಿದಿದ್ದಕ್ಕೆ ಹೀಗಾಗಿದೆ ಅನ್ಸುತ್ತೆ" ಅಂದಳು.

ರಾಮ್ ಲಾಲನ ಮಾತಿನ ಚರ್ಯೆ ಬದಲಾಯಿತು. "ಶರಾಬು ಏನಾದ್ರು ಉಳಿದಿದೆಯ? ನಂಗೊಂದೆರಡು ತೊಟ್ಟು ಕೊಡು" ಅಂದ.

ಮುಲಾಮನ್ನು ಟೇಬಲ್ ಮೇಲೆ ಇಡುತ್ತ ಸೌಗಂಧಿ "ಅಯ್ಯೋ ಉಳಿದಿದ್ರೆ ನಾನೇ ಹಾಕ್ಕೊಂಡು ಈ ದರಿದ್ರ ತಲೆನೋವನ್ನು ಶಮನ ಮಾಡ್ಕೋತ್ತಿದ್ದೆ. ನೋಡು ರಾಮ್‌ಲಾಲ್, ಆ ಮನುಷ್ಯನ್ನ ಇಲ್ಲಿಗೆ ಕರ್ಕೊಂಡು ಬಾ" ಅಂದಳು.

"ಆಗಲ್ಲ. ಅವನು ದೊಡ್ಡ ಮನುಷ್ಯ. ಓಣಿ ತುದಿಗೆ ಕಾರು ನಿಲಿಸಿಕೊಂಡಿರೋಕು ಅವನಿಗೆ ಇಷ್ಟ ಇರ್ಲಿಲ್ಲ. ನೋಡು ಬೇಗ ಸಿಂಗಾರ ಮಾಡ್ಕೊ, ಹೊರಟು ಬಿಡೋಣ. ಖಂಡಿತ ನಿಂಗೆ ನಿರಾಶೆಯಾಗೊಲ್ಲ" ಅಂದ ರಾಮ್‌ಲಾಲ್.

ಅವನು ಈಗ ಕುದುರಿಸಿರೋದು ಮಾಮೂಲಿ ಬೆಲೆಯಾದ ಏಳು ರೂಪಾಯಿ ಎಂಟಾಣೆಗೆ. ಸೌಗಂಧಿಗೆ ಹಣದ ತುರ್ತು ಇಲ್ಲದಿದ್ರೆ, ಬಿಲ್ ಖುಲ್ ಆಗಲ್ಲ ಅಂತ ರಾಮ್‌ಲಾಲನ್ನ ಓಡಿಸಿಬಿಡೋಳು. ಇವಳ ಪಕ್ಕದ ಕೋಣೆಯಲ್ಲಿ ವಯಸ್ಸಿಗೆ ಬಂದ ಮಗಳ ಜೊತೆ ಒಬ್ಬ ಮದ್ರಾಸಿ ಹೆಂಗಸು ವಾಸಕ್ಕೆ ಇದ್ದಾಳೆ. ಆಕೆಯ ಗಂಡ ಕೆಲದಿನಗಳ ಹಿಂದೆ ಅಪಘಾತದಲ್ಲಿ ತೀರಿಕೊಂಡಿದ್ದ. ತಾಯಿ, ಮಗಳಿಬ್ಬರು ಮದ್ರಾಸಿಗೆ ವಾಪಾಸು ಹೋಗಬೇಕು ಎಂದಿದ್ದಾರೆ. ಆದರೆ ಆಕೆಯ ಹತ್ತಿರ ರೈಲು ಟಿಕೇಟಿಗೂ ದುಡ್ಡಿಲ್ಲ. "ಚಿಂತೆ ಮಾಡ್ಬೇಡ ಅಕ್ಕ. ನನ್ನ ಗಂಡಸು ಪೂಣೆಯಿಂದ ಬರುವವನಿದ್ದಾನೆ. ಅವನು ನನಗೆ ಒಂದಷ್ಟು ಕಾಸು ಕೊಡ್ತಾನೆ. ಆ ಕಾಸು ಸಿಕ್ಕ ಕೂಡಲೇ ನಿಮ್ಮನ್ನ ಕಳಿಸೋ ವ್ಯವಸ್ಥೆ ಮಾಡ್ತೀನಿ" ಅಂತ ಸೌಗಂಧಿ ಆ ಮದ್ರಾಸಿ ಹೆಂಗಸಿಗೆ ಭರವಸೆ ಕೊಟ್ಟಿದ್ದಳು. ಮಧುವೇನೋ ಬರುವವನಿದ್ದ ಅನ್ನೋದು ಸರಿ. ಆದರೆ ಹಣವನ್ನು ಸೌಗಂಧಿಯೇ ಹೊಂದಿಸಬೇಕಿತ್ತಲ್ಲ. ಹೀಗಾಗಿ ಒಲ್ಲದ ಮನಸ್ಸಿನಿಂದ ಎದ್ದು, ಹೂವಿನ ಪ್ರಿಂಟು ಇರೊ ಸೀರೆ ಉಟ್ಟು ಸಿಂಗಾರ ಮಾಡಿಕೊಂಡಳು. ಹೂಜಿಯಿಂದ ಒಂದು ಲೋಟ ನೀರು ಕುಡಿದು ಹೊರಟಳು.

ಓಣಿ ನಿಶ್ಶಬ್ದವಾಗಿತ್ತು. ಯುದ್ಧ ಕಾಲವಾದ್ದರಿಂದ ಬೀದಿ ದೀಪಗಳನ್ನು ಆರಿಸಲಾಗಿತ್ತು. ಮಬ್ಬು ಬೆಳಕಿನಲ್ಲಿ ಅವಳಿಗೆ ಓಣಿ ತುದಿಯ ಕಾರಿನ ಆಕೃತಿ ಕಂಡಿತು. ಇಬ್ಬರು ಕಾರಿನ ಸಮೀಪ ನಡೆದು ನಿಂತರು.

ರಾಮ್‌ಲಾಲ್ ಮುಂದೆ ಹೋಗಿ ಕಾರಲ್ಲಿದ್ದವನಿಗೆ "ಇಲ್ಲಿದ್ದಾಳೆ ನೋಡಿ. ನಯವಿನಯದ ಹುಡುಗಿ. ದಂಧೆಗೆ ಹೊಸಬಳು" ಎಂದು ಹೇಳಿ, ಸೌಗಂಧಿ ಕಡೆ ತಿರುಗಿ "ನೋಡು! ಇಲ್ಲಿ ಬಾ. ಸೇಠ್ ಸಾಹೇಬರು ಕಾಯ್ತ ಇದ್ದಾರೆ" ಎಂದ.

ಅವಳು ಅಳುಕುತ್ತಲೇ ಕಾರಿನ ಸಮೀಪ ಹೋದಳು. ಹಠಾತ್ತ್ ಪ್ರಖರವಾದ ಟಾರ್ಚಿನ ಲೈಟು ಅವಳ ಮುಖದ ಮೇಲೆ ಬಿದ್ದು, ಅವಳಿಗೆ ಏನೂ ಕಾಣದಂತಾಯಿತು. ಕಾರಿನಲ್ಲಿದ್ದವನು 'ಥತ್ತ್!' ಎಂದು, ಮತ್ತೊಂದು ಮಾತನಾಡದೆ ಕಾರನ್ನು ಚಾಲು ಮಾಡಿ ಹೋಗಿಬಿಟ್ಟ.

ಮುಖದ ಮೇಲೆ ಬಿದ್ದ ಪ್ರಖರ ಬೆಳಕಿಂದಾಗಿ ಅವಳಿಗೆ ಪ್ರತಿಕ್ರಿಯೆ ನೀಡಲೂ ಸಮಯವಿರಲಿಲ್ಲ. ಕಾರಲ್ಲಿದ್ದವನ ಮುಖವನ್ನು ಅವಳಿಗೆ ನೋಡಲಾಗಲಿಲ್ಲ. "ಥತ್ತ್" ಎಂಬ ಧ್ವನಿ ಮಾತ್ರ ಕೇಳಿತು. ಅವನ ಈ ಉದ್ಗಾರದ ಅರ್ಥವೇನು ಅನ್ನೋದು ಅವಳಿಗೆ ತಿಳಿಯಲಿಲ್ಲ.

ರಾಮ್‌ಲಾಲ್ "ನಿಮಗೆ ಇವಳು ಹಿಡಿಸಲಿಲ್ಲ. ನನ್ನ ಎರಡು ತಾಸು ಹಾಳಾಯ್ತು" ಎಂದು ಗೊಣಗುತ್ತ ಅವಳಿಗೆ ಏನು ಹೇಳದೆ ಹೊರಟು ಹೋದ. ಸೌಗಂಧಿ ನಡುಗುತ್ತಿದ್ದಳು. ಸನ್ನಿವೇಶಕ್ಕೆ ಹೊಂದಿಕೊಳ್ಳಲು ಹೆಣಗುತ್ತಿದ್ದಳು. "ಥೂ ಅಂದ್ರೆ ಏನರ್ಥ? ಅವನಿಗೆ ನಾನು ಹಿಡಿಸ್ಲಿಲ್ಲ ಅಂತನಾ? ಸೂಳೆ ಮಗನ್ನ ತಂದು..."

ಕಾರು ಹೊರಟು ಹೋಗಿತ್ತು. ಹಿಂಬದಿಯ ಲೈಟಿನ ಕೆಂಪು ಬಣ್ಣ ದೂರದೂರಾಗುತ್ತ ಮಸುಕಾಗುತ್ತಿತ್ತು. "ನಿಲ್ಲಿ, ವಾಪಸ್ಸು ಬನ್ನಿ...ವಾಪಸ್ಸು ಬನ್ನಿ.." ಎಂದು ಅವಳಿಗೆ ಚೀರಬೇಕೆನಿಸಿತು. ನಿರ್ಜನ ಬಜಾರಿನ ಬೀದಿಯಲ್ಲಿ ಅವಳು ಏಕಾಂಗಿಯಾಗಿ ನಿಂತಿದ್ದಳು. ಅವಳುಟ್ಟ ಬೂದುಬಣ್ಣದ ಹೂವುಗಳ ಪ್ರಿಂಟಿನ ಸೀರೆ ರಾತ್ರಿಯ ಗಾಳಿಗೆ ಹಾರಾಡುತ್ತಿತ್ತು. ನಿಧಾನಕ್ಕೆ ಮನೆ ಕಡೆ ಹೆಜ್ಜೆ ಹಾಕತೊಡಗಿದಳು.

ಆದರೆ ರಾಮ್‌ಲಾಲ್ ಮತ್ತು ಕಾರಲ್ಲಿದ್ದ ಮನುಷ್ಯನ ಬಗ್ಗೆ ಯೋಚನೆ ಬಂದದ್ದೇ ನಿಂತುಬಿಟ್ಟಳು. ಸೇಠ್‌ಗೆ ಅವಳು ಹಿಡಿಸಲಿಲ್ಲ ಅಂದನಲ್ಲ ರಾಮ್‌ಲಾಲ್; ಹಿಡಿಸದೇ ಇದ್ದದ್ದು ಅವಳು ಚೆಂದವಿಲ್ಲ ಎಂಬ ಕಾರಣಕ್ಕೆ

ಅಂತ ಏನು ಹೇಳಲಿಲ್ಲವಲ್ಲ. ಏನೀಗ? ಅವಳಿಗೂ ಸುಮಾರು ಜನ ಹಿಡಿಸೋದಿಲ್ಲ. ತನ್ನ ಮಗ್ಗುಲಿಗೆ ಬರುವ ಹಲವರನ್ನು ಅವಳು ಅಸಡ್ಡೆ ಮಾಡೋದಿದೆ. ಮೊನ್ನೆ ರಾತ್ರಿ ಬಂದವನೊಬ್ಬ ಎಂಥಾ ಕುರೂಪಿ ಯಾಗಿದ್ದ ಅಂದ್ರೆ, ಅವನು ಅವಳ ಮಗ್ಗುಲಲ್ಲಿ ಮಲಗಿದಾಗ ಅವಳಿಗೆ ವಾಂತಿ ಬಂದ ಹಾಗಾಯ್ತು. ಆದರೆ ಅವಳು ಆ ಅಸಹ್ಯವನ್ನು ತೋರಿಸಲಿಲ್ಲ ಅಷ್ಟೆ.

ಆದರೆ, ಕಾರಲ್ಲಿದ್ದೋನು? ಅವನು ಅವಳ ಮುಖಕ್ಕೆ ನೇರ ಉಗಿದನಲ್ಲ! 'ರಾಮಲಾಲ್! ಯಾವ ಬಿಲದಿಂದ ಈ ಹುಳನಾ ಹುಡುಕಿ ಗಂಧ ಪೂಸಿ ಕರ್ಕೊಂಡು ಬಂದೆಯಯ್ಯ? ಇವಳಿಗೆ ಹತ್ತು ರೂಪಾಯಿ ಬೆಲೆಯಾ! ಇವಳಿಗೆ? ಥೂ!" ಅಂತ ಅವನ ನಡುವಳಿಕೆಯ ಅರ್ಥ ಅಲ್ಲವಾ.

ಅವಳಿಗೆ ತನ್ನ ಮೇಲೂ ಮತ್ತು ಬೆಳಗಿನ 2 ಗಂಟೆಗೆ ಎಬ್ಬಿಸಿದ ರಾಮ್‌ಲಾಲನ ಮೇಲೂ ಕೋಪ ಬಂದಿತ್ತು. ಅವನಾದರೂ ಇವಳಿಗೆ ಒಳ್ಳೆದಾಗಲಿ ಅಂತಲೇ ಎಬ್ಬಿಸಿದ್ದು ಅಂತಲೂ, ತನ್ನದೂ ಏನು ತಪ್ಪಿಲ್ಲ ಅಂತಲೂ ಅವಳಿಗೆ ಗೊತ್ತಿತ್ತು. ಆದರೂ ಇಡಿ ಪ್ರಸಂಗ ಮತ್ತೊಮ್ಮೆ ನಡಿಬೇಕು, ಅವಳು ಕಾರಿನ ಹತ್ತಿರ ನಿಧಾನಕ್ಕೆ ಹೋಗಬೇಕು, ಮುಖದ ಮೇಲೆ ಟಾರ್ಚಿನ ಬೆಳಕು ಬೀಳಬೇಕು, ಕಾರೊಳಗಿನ ಮನುಷ್ಯ 'ಥತ್' ಅನ್ನಬೇಕು, ತಾನು ಅವನ ಕೂದಲು ಹಿಡಿದು ಕಾರಿಂದ ಹೊರಗೆಳೆದು ತನಗೆ ಸುಸ್ತಾಗುವವರೆಗೂ ಮುಖ ಮೋರೆ ನೋಡದೆ ಚಚ್ಚಬೇಕು ಅನ್ನೋಷ್ಟು ಕೋಪ ಬಂದಿತ್ತು.

ಸೌಗಂಧಿ ನೀನೇನು ಕುರೂಪಿಯಲ್ಲ ಎಂದು ಅವಳು ತನಗೆ ತಾನೆ ಹೇಳಿಕೊಂಡಳು. ಹೌದು ಹರೆಯದ ಬಿಗುವು ಉಳಿದಿಲ್ಲ, ಆದರೂ ಎಂದೂ ಯಾರೂ ತನ್ನನ್ನು ಕುರೂಪಿ ಅಂದದ್ದಿಲ್ಲ. ಗಂಡಸರು ಹಿಂತಿರುಗಿ ಮತ್ತೊಮ್ಮೆ ನೋಡಬೇಕು ಅನ್ನೋವಷ್ಟು ಚೆಲುವೆ. ಗಂಡಸರು ಬಯಸುವಂಥದ್ದೆಲ್ಲ ತನ್ನಲ್ಲಿದೆ ಅನ್ನೋದು ಅವಳಿಗೆ ಗೊತ್ತಿತ್ತು. ಇನ್ನೂ ಯೌವನವಿದೆ, ಕಟ್ಟುಮಸ್ತು ದೇಹವಿದೆ, ಮುದ ನೀಡುವ ನಾಜೂಕಿನ ನಡುವಳಿಕೆ ಇದೆ. ಕಳೆದ ಐದಾರು ವರ್ಷಗಳಲ್ಲಿ ಅವಳ ಸಂಗ ಮಾಡಿದವರೆಲ್ಲ ಖುಷಿಯಾಗಿ ಹೋಗಿದ್ದಾರೆ.

ಅವಳದು ಮೃದು ಹೃದಯ. ಹೋದ ಕ್ರಿಸ್ಮಸ್ ಹಬ್ಬದ ವೇಳೆ, ಅವಳು ಗೋಲ್ ಪೀಠ್ ಪ್ರದೇಶದಲ್ಲಿದ್ದಾಗ, ಹೈದ್ರಾಬಾದಿನಿಂದ ಬಂದ ಯುವಕನೊಬ್ಬ ಅವಳ ಜೊತೆ ರಾತ್ರಿ ಮಲಗಿದ್ದ. ಬೆಳಗ್ಗೆ ಎದ್ದಾಗ ಅವನ ಪರ್ಸ್ ಕಾಣೆಯಾಗಿತ್ತು. ಕಳ್ಳಬುದ್ಧಿಯ ಕೆಲಸದ ಹುಡುಗ ಪರ್ಸ್ ಹಾರಿಸಿಕೊಂಡು ಪರಾರಿಯಾಗಿದ್ದ. ರಜೆಯ ಮಜೆಗಾಗಿ ಬಾಂಬೆ ತನಕ ಬಂದಿದ್ದ ಆ ಯುವಕ ಊರಿಗೆ ವಾಪಾಸು ಹೋಗಲೂ ಕಾಸಿಲ್ಲದೆ ಕಕ್ಕಾಬಿಕ್ಕಿಯಾಗಿದ್ದ. ಅವಳು ರಾತ್ರಿ ಅವನು ತನಗೆ ಕೊಟ್ಟಿದ್ದ ಕಾಸನ್ನು ವಾಪಸು ಕೊಟ್ಟು ಕಳುಹಿಸಿದ್ದಳು.

ಅವಳಿಗೆ ಮನೆಗೆ ಹಿಂದಿರುಗಿ, ತಣ್ಣಗೆ ಕುಡಿದು, ಹಾಯಾಗಿ ನಿದ್ದೆ ಮಾಡಬೇಕೆನಿಸಿತು. ಮನೆಯ ಕಡೆ ನಡೆಯತೊಡಗಿದಳು. ಆದರೆ ಕೋಣೆಯ ಬಾಗಿಲ ಬಳಿ ಬರುವ ಹೊತ್ತಿಗೆ, ನೋವು ಅವಮಾನಗಳು ಮತ್ತೆ ಅವಳನ್ನು ಮುತ್ತಿದವು. ನಡೆದದ್ದನ್ನು ಮರೆಯೋದಕ್ಕೆ ಆಗುತ್ತಿರಲಿಲ್ಲ. ಅವಳನ್ನು ಬೀದಿಗೆ ಕರೆಸಿ ಕಪಾಳಕ್ಕೆ ಬಾರಿಸಿದ್ದರು. ಅವಳನ್ನು ಮಾರಾಟಕ್ಕಿಟ್ಟ ಪ್ರಾಣಿಯಂತೆ ಕಂಡಿದ್ದರು. ಮುಖದ ಮೇಲೆ ಟಾರ್ಚ್ ಬಿಟ್ಟು ಏನು ಮೈಕೈ ತುಂಬಿಕೊಂಡವಳೋ ಇಲ್ಲ ನರಪೇತಲವೋ ಅಂತ ನೋಡಿದರಲ್ಲ. ನೋಡಿ ಬಿಟ್ಟಾಕಿ ಹೋದ್ರಲ್ಲ.

ಆ ಮನುಷ್ಯ ವಾಪಸು ಬಂದರೆ, ಬಟ್ಟೆ ಎಲ್ಲ ಕಿತ್ತಾಕಿ ಅವನೆದುರು ನಿಂತು 'ನೋಡೋ, ನಿಂಗೆ ಬೇಕಾದ್ದು ಇದೆ ಅಲ್ಲವಾ? ಬಾ ಪುಕ್ಕಟೆ ಭೋಗಿಸಿ ಹೋಗು. ಆದರೆ ಈ ದೇಹದ ಒಳಗಿರೋ ಹೆಣ್ಣ ಹೆಂಗಸನ್ನು ನೀನೆಂದೂ ತಟ್ಟಲಾರೆಯೋ!' ಎಂದು ಚೀರಬೇಕು ಅಂತ ಅವಳಿಗೆ ಅನಿಸಿತು.

ಕೋಣೆಯ ಬಾಗಿಲ ಬೀಗ ತೆರೆಯಲು ತನ್ನ ಬಾಡಿಯ ಅಡಿ ಇಟ್ಟುಕೊಂಡಿದ್ದ ಬೀಗದ ಕೈ ಹೊರ ತೆಗೆದಳು. ಆದರೆ ಬೀಗವಾಗಲೇ ತೆರೆದಿತ್ತು. ಮೆಲ್ಲಗೆ ಬಾಗಿಲು ದೂಡಿದಳು. ಬಾಗಿಲು ಕಿರುಗುಟ್ಟಿತ್ತು. ಒಳಗಿನಿಂದ ಹಾಕಿದ್ದ ಚಿಲಕ ತೆರೆಯಿತು. ಅವಳು ಒಳಗೆ ಹೋದಳು.

ಮಧು ತನ್ನ ಪೊದೆಮೀಸೆಯೊಳಗಿಂದ ನಗುತ್ತ ಜತನದಿಂದ ಚಿಲಕ ಹಾಕಿ "ಕೊನೆಗೂ ನನ್ನ ಮಾತು ಪಾಲಿಸಿದೆ ನೋಡು. ಬೆಳಗಿನ ಜಾವದ ವಾಕಿಂಗ್ ಮಾಡಿ ಬಂದೆಯಲ್ಲವ. ದೇಹದ ಆರೋಗ್ಯಕ್ಕೆ ಬೆಳಗಿನ ವಾಕಿಂಗ್‌ಗಿಂತ ಉತ್ತಮವಾದ ಬೇರೆ ಮದ್ದಿಲ್ಲ ಕಣೆ. ದೇಹದ ಆಯಾಸ ಹೀಗೆ ಮಾಯ ಆಗಿಬಿಡ್ತದೆ. ಮತ್ತೇ ನಿನ್ನನ್ನು ಕಾಡೊ ಬೆನ್ನು ನೋವೂ ಗುಣವಾಗ್ತದೆ ಗೊತ್ತ. ಹೂಂ, ಎಷ್ಟು ದೂರ ಹೋಗಿದ್ದೆ? ವಿಕ್ಟೋರಿಯ ಗಾರ್ಡನಿನ್ನ ತನಕ ಹೋಗಿ ಬಂದೆಯ?" ಅಂತ ಕೇಳಿದ.

ಸೌಗಂಧಿ ಉತ್ತರಿಸಲಿಲ್ಲ, ಮಧುವಿಗೂ ಉತ್ತರ ಬೇಕಿರಲಿಲ್ಲ. ಅವನು ತನ್ನ ಮಾತುಗಳನ್ನು ಅವಳು ಕೇಳಬೇಕೆನ್ನುವವನೇ ಹೊರತು ತಿರುಗಿ ಅವಳ ಮಾತನ್ನು ಕೇಳುವ ಕಿವಿ ಇದ್ದವನಲ್ಲ.

ಮಧು, ಈಗಾಗಲೇ ಅವನ ತಲೆ ಕೂದಲ ಎಣ್ಣೆಯಿಂದ ಮೇಣಗಟ್ಟಿ ಕಪ್ಪಾಗಿದ ಬೆತ್ತದ ಖುರ್ಚಿಯಲ್ಲಿ ಕಾಲಮೇಲೆ ಕಾಲು ಹಾಕಿಕೊಂಡು, ಒಂದು ಕಾಲನ್ನು ಅಲ್ಲಾಡಿಸುತ್ತ, ಪೊದೆ ಮೀಸೆಯ ಜೊತೆ ಆಟವಾಡುತ್ತ, ಕೂತ. ಸೌಗಂಧಿ ಮಂಚದ ಮೇಲೆ ಕೂತಳು, 'ಇವತ್ತು ನಿನಗಾಗಿ ಕಾಯ್ತ ಇದ್ದೆ' ಅಂದಳು.

ಮಧು 'ಕಾಯ್ತ ಇದ್ದೆಯಾ?' ಅಂತ ಅಚ್ಚರಿ ತೋರುತ್ತ 'ನಾನು ಇವತ್ತು ಬರ್ತೀನಿ ಅಂತ ನಿಂಗೆ ಹ್ಯಾಗೆ ಗೊತ್ತಾಯ್ತು?' ಅಂತ ಕೇಳಿದ.

ಸೌಗಂಧಿ ನಸುನಕ್ಕು ಹೇಳಿದಳು "ನಿನ್ನೆ ರಾತ್ರಿ ನಿನ್ನ ಕನಸು ಕಂಡೆ. ಬೆಳಗ್ಗೆ ಎದ್ದು ನೋಡಿದ್ರೆ ನೀನು ಇರ್ಲಿಲ್ಲ.ಎದ್ದು ವಾಕಿಂಗ್ ಹೋದೆ".

"ನೀನು ತಿರುಗಿ ಬಂದಾಗ ನಾನು ಹಾಜರ್" ಎಂದು ಮಧು ಖುಷಿಯಲ್ಲಿ ಹೇಳಿದ. "ದೊಡ್ಡೋರ ಮಾತೆ ಇದೆಯಲ್ಲ–ಪ್ರೇಮಿಗಳ ಹೃದಯ ಒಟ್ಟಿಗೆ ಮಿಡಿತದೆ ಅಂತ! ಎಷ್ಟು ಹೊತ್ತಿಗೆ ನನ್ನ ಕನಸು ಕಂಡೆ?" ಅಂದ.

ಸೌಗಂಧಿ "ಈಗ್ಗೆ ಎರಡು ತಾಸಿನ ಹಿಂದೆ" ಅಂದಳು.

ಮಧು "ಆಹಾ! ಸರಿಸುಮಾರು ಅದೇ ಹೊತ್ತಿಗೆ ನೀನೂ ನನ್ನ ಕನಸಲ್ಲಿದ್ದೆ. ಹೂವಿನ ಚಿತ್ತಾರದ ಸೀರೆ ಉಟ್ಟಿದ್ದೆ, ಇದೇ ಈಗ ಉಟ್ಟಿದಿಯಲ್ಲ ಇದೇ ಸೀರೆ! ಮತ್ತೆ ನಿನ್ನ ಕೈಲ್ಲಿ ಏನೋ ಇತ್ತು. ಏನು ಅಂತಿಯ! ಕಾಸು ತುಂಬಿದ್ದ ಪುಟ್ಟ ಚೀಲ! ಮತ್ತೆ ನೀನಂದೆ 'ಮಧು ನೀನ್ಯಾಕೆ ಹಣದ ಬಗ್ಗೆ ಅಷ್ಟು ತಲೆಕೆಡಿಸ್ಕೋತಿಯ! ಈಗೋ ನಂದೆಲ್ಲಾ ನಿಂದೇ ಅಲ್ಲವಾ!' ನಿನ್ನ ಮೇಲೆ ಆಣೆ ಇಟ್ಟು ಹೇಳ್ತೀನೆ. ಕನಸಿಂದ ಎದ್ದೋನೆ ಪೂನದಿಂದ ಸೀದ ಬಾಂಬೆಗೆ ಬಂದೆ ನೋಡು. ಆದ್ರೆ ಒಂದು ಕೆಟ್ಟ ಸುದ್ದಿ ಇದೆ. ನಾನು ಕಷ್ಟಕ್ಕೆ ಸಿಕ್ಕಿದ್ದೇನೆ. ಮಾಡಬೇಕಾದ ತನಿಖೆಯೊಂದನ್ನು ನೆಟ್ಟಗೆ ಮಾಡ್ಲಿಲ್ಲ. ಈಗ ಇನ್ಸ್‌ಪೆಕ್ಟರಿಗೆ ಇಪ್ಪತ್ತೊ–ಮೂವತ್ತೋ ಲಂಚ ಕೊಡದೆ ಹೋದ್ರೆ ಕೆಲಸ ಕಳ್ಕೋಳೊ ಪರಿಸ್ಥಿತಿ

ಬಂದಿದೆ. ಇರಲಿ, ಈಗ ಅದೆಲ್ಲಾ ಬಿಡು. ನೀನು ದಣಿದಿದ್ದೀಯ ಅಂತ ಕಾಣುತ್ತೆ. ಒಂಚೂರು ಮಲಗಿ ಆರಾಮ ಮಾಡು ಚಿನ್ನ, ನಾನು ನಿನ್ನ ಕಾಲು ಒತ್ತೇನೆ. ಅಭ್ಯಾಸವಿಲ್ಲದೆ ಇದ್ರೆ ವಾಕಿಂಗ್ ಮಾಡಿ ಸುಸ್ತಾಗುತ್ತೆ. ಎಲ್ಲಿ ಮೈಚಾಚಿ ನಿನ್ನ ಕಾಲನ ಈಚೆ ಕೊಡು" ಅಂದ.

ಸೌಗಂಧಿ ತನ್ನ ತೋಳ ಮೇಲೆ ತಲೆ ಇಟ್ಟು ಮಲಗಿದಳು. ಅವಳದಲ್ಲದ ಧ್ವನಿಯಲ್ಲಿ 'ಮಧು, ನಿನ್ನನ್ನು ಕಷ್ಟಕ್ಕೆ ದೂಡಿರುವ ಆ ಜನ ಯಾರು? ನೀನು ಕೆಲಸ ಕಳೆದುಕೊಂಡು, ಜೈಲು ಸೇರುವಂತಹ ಸ್ಥಿತಿ ಇದ್ದಲ್ಲಿ ನನಗೆ ತಿಳಿಸು. ಅಂಥ ಪರಿಸ್ಥಿತಿಯಲ್ಲಿ ಹೆಚ್ಚು ಲಂಚ ಕೊಟ್ಟರೆ ನೀನು ಕ್ಷೇಮವಾಗಿರ ಬಹುದು. ನೀನು ನಿನ್ನ ನೌಕರಿಯ ಬಗ್ಗೆ ಕೆಟ್ಟ ಸುದ್ದಿ ಹೇಳಿದಾಗಿನಿಂದ ನನ್ನ ಎದ್ದೆ ಹೊಡೆದುಕೊಳ್ಳುತ್ತಿದೆ. ಅದು ಒತ್ತಟ್ಟಿಗಿರಲಿ. ನೀನು ಯಾವಾಗ ವಾಪಾಸು ಹೋಗುತ್ತಿ?' ಎಂದು ಕೇಳಿದಳು. ಮಧು ಅವಳ ಬಾಯಿಂದ ಹೊರಟ ಶರಾಬಿನ ವಾಸನೆ ಹಿಡಿದು, ಗಾಳ ಹಾಕಲು ಇದೆ ಒಳ್ಳೆ ಸಮಯವೆಂದರಿತು "ಮಧ್ಯಾಹ್ನದ ಹೊತ್ತಿಗೆ ಹೊರಡಬೇಕು. ಸಂಜೆಯೊಳಗೆ ಇನ್ಸ್‌ಪೆಕ್ಟರ್ ಕಿಸೆಯಲ್ಲಿ ಐವತ್ತೋ ನೂರೋ ತುರುಕಬೇಕು" ಅಂದ.

"ಐವತ್ತು ರೂಪಾಯಿಯಾ!" ಅಂದು ಸೌಗಂಧಿ ಹಾಸಿಗೆ ಬಿಟ್ಟು ಎದ್ದಳು. ಗೋಡೆಗೆ ತೂಗು ಹಾಕಿದ್ದ ಫೋಟೊಗಳ ಎದುರು ಹೋಗಿ ನಿಂತಳು. ಸಾಲಿನಲ್ಲಿ ಮೂರನೆಯದು ಮಧುವಿನ ಫೋಟೊವಾಗಿತ್ತು. ಅದರಲ್ಲಿ ಅವನು ಎರಡು ಕೈಗಳನ್ನು ತೊಡೆ ಮೇಲಿಟ್ಟು ಖುರ್ಚಿಯಲ್ಲಿ ಕೂತಿದ್ದ. ಹಿನ್ನೆಲೆಯಲ್ಲಿ ಪೇಂಟಿನಿಂದ ಹೂವಿನ ಚಿತ್ತಾರ ಬರೆದಿರುವ ಕಪ್ಪು ಪರದೆ ಇತ್ತು. ಹಾಕಿದ ಕೋಟಿನ ಎದೆಯಲ್ಲಿ ಗುಲಾಬಿ ಸಿಕ್ಕಿಸಿಕೊಂಡಿದ್ದ. ಖುರ್ಚಿ ಪಕ್ಕದಲ್ಲಿದ್ದ ಗಿಡ್ಡ ಮೇಜಿನ ಮೇಲೆ ಎರಡು ದಪ್ಪನೆ ಪುಸ್ತಕಗಳನ್ನು ಜೋಡಿಸಿಡಲಾಗಿತ್ತು. ಕ್ಯಾಮರವನ್ನೇ ದಿಟ್ಟಿಸುವ ಅಸಹಜ ವಕ್ರ ಮುಖಚರ್ಯೆ ಯೊಂದಿಗೆ ಮಧು ಪೋಸು ಕೊಟ್ಟಿದ್ದ.

ಸೌಗಂಧಿ ನಗತೊಡಗಿದಳು. "ಯಾಕೆ ನಗುವಂಥದ್ದೇನಿದೆ ಫೋಟೊದಲ್ಲಿ?" ಎಂದು ಮಧು ಕೇಳಿದ.

ಸೌಗಂಧಿ ಸಾಲಿನಲ್ಲಿ ಮೊದಲನೆಯದಾಗಿದ್ದ ಮುನ್ಸಿಪಾಲಿಟಿ ಆರೋಗ್ಯಾಧಿಕಾರಿಯ ಫೋಟೊಕ್ಕೆ ಕೈ ಹಾಕಿದಳು. "ಇವನ ಮುಖ ನೋಡು. ಒಬ್ಬ ರಾಣಿ ತನ್ನ ಮೋಹಪಾಶಕ್ಕೆ ಬಿದ್ದಿದ್ದಳು ಅಂತ ಇವನು ಹೇಳ್ಕೊತಾನೆ ಗೊತ್ತಾ! ಈ ಮುಖಕ್ಕೆ ರಾಣಿ ಬೇರೆ ಕೇಡು" ಎಂದು ಗಾರೆ ಕಿತ್ತುಬರುವಷ್ಟು ರಭಸದಲ್ಲಿ ಗೋಡೆಯಿಂದ ಫೋಟೊವನ್ನು ಕಿತ್ತು ನೆಲಕ್ಕಪ್ಪಳಿಸಿದಳು."ಬೆಳಗ್ಗೆ ಕಸ ಗುಡಿಸೋ ನಮ್ಮ ರಾಣಿ ಬಂದು, ಈ ರಾಜನನ್ನು ಬಾಕಿ ಕಸದ ಜೊತೆ ಎತ್ಕೊಂಡು ಹೋಗ್ತಾಳೆ" ಅಂದು ಹಗುರವಾಗಿ ನಗತೊಡಗಿದಳು. ಆ ನಗು ಬೇಸಿಗೆಯ ಮೊದಲ ಮಳೆಯಂತಿತ್ತು. ಮಧು ಕಷ್ಟದಲ್ಲಿ ಕಿರುನಗೆ ಹೊಮ್ಮಿಸಿ ನಂತರ ಬಲವಂತದಿಂದ ಗಹಗಹಿಸಿ ನಗತೊಡಗಿದ.

ಅಷ್ಟರಲ್ಲಿ ಸೌಗಂಧಿ ಸಾಲಿನಲ್ಲಿದ್ದ ಎರಡನೇ ಫೋಟೊವನ್ನು ಕಿತ್ತು ಕಿಟಕಿಯಿಂದ ಬೀದಿಗೆ ಬೀಸಾಡಿದಳು. ಈಗ ಮಧುವಿನ

# ಆತ್ಮಕ್ಕೊಂದು ಕವಚ

ಅಮ್ಮಾ ನನಗೊಂದು ಅಂಗಿ ಹೊಲಿದುಕೊಡು
ಅಳತೆ ಪಟ್ಟಿ ಹಿಡಿದು, ಸರಿಯಾಗಿ ಅಳತೆ ಮಾಡಿ
ಗಟ್ಟಿಯಾಗಿ ಹೊಲಿದುಬಿಡು
ನನ್ನ ಅಂಗಾಂಗಗಳು ಚಿಗುರೊಡೆಯದಂತೆ
ಬಾಲ್ಯ ಸದಾ ಉಳಿಯುವಂತೆ
ದೇಹ ಅರಳಿದರೂ ಜೊಲ್ಲು ಸುರಿಸುವ ಕಣ್ಣುಗಳಿಂದ ಅಡಗುವಂತೆ

ಆದರೆ ಅಮ್ಮ ನನಗೂ ಚಿಗುರುವಾಸೆ
ಆಸೆ ಹುಟ್ಟಿಸುವ ಕನಸು
ದೇಹ ಮನಸ್ಸುಗಳೊಂದಾಗಿ ರಾಗವಾಗುವ ಬಯಕೆ
ಮತ್ತೆ ಮತ್ತೆ ದ್ವಂದ್ವ

ಹಾಳಾಗಲಿ ಬಿಡು ಅಮ್ಮ
ಆದರೆ ದಡ್ಡ ಸೂಳೆಯಂತೆ
ಬರುವ ಗಿರಾಕಿಗಳಲ್ಲೆಲ್ಲ ಪ್ರೀತಿ ಹುಡುಕುವ
ಈ ಮನಸ್ಸಿಗೊಂದು ಅಂಗಿ ಮರೆಯದೆ ಹೊಲಿದುಬಿಡು
ಆತ್ಮಕ್ಕೊಂದು ಕವಚ

■ ಶೀತಲ ಭಟ್



ಫೋಟೋಕ್ಕೆ ಕೈಹಚ್ಚಿ "ಈ ಬೋಳಿಮಗ ಇಲ್ಲೇನು ಮಾಡ್ತಿದ್ದಾನೆ. ಹ್ಯಾಪು ಮೋರೆ ಖದಿಮರು ಈ ಗೋಡೆಯಲ್ಲಿ ಮೆರೆಯೋದು ನಂಗೇನೂ ಇಷ್ಟವಿಲ್ಲ. ಇದು ನೀನಾ ಮಧು!" ಅಂದಳು. ಮಧು ಪೆದ್ದು ಪೆದ್ದಾಗಿ ನಕ್ಕ.

ಅವಳು ರುಮಾಲು ಸುತ್ತಿಕೊಂಡಿದ್ದ ಗಂಡಸಿನ ನಾಲ್ಕನೇ ಫೋಟೋವನ್ನು ಕಿತ್ತಿ, ನಂತರ ಮಧು ಆತಂಕದಿಂದ ನೋಡು ತ್ತಿರುವಂತೆಯೇ ಅವನ ಫೋಟೋವನ್ನೂ ಗೋಡೆಯಿಂದೆಳೆದು, ಎರಡನ್ನೂ ಕಿಟಕಿಯಾಚೆ ಬೀದಿಗೆಸೆದಳು. ನೆಲಕ್ಕಪ್ಪಳಿಸಿ ಗಾಜು ಪುಡಿಪುಡಿಯಾದ ಶಬ್ದ ಇಬ್ಬರಿಗೂ ಕೇಳಿತು. ಇಷ್ಟಾದರೂ ಮಧು ಸಾವರಿಸಿಕೊಂಡು "ಒಳ್ಳೇ ಕೆಲಸ ಮಾಡಿದೆ! ನಂಗೂ ಆ ನನ್ನ ಫೋಟೋ ಒಂಚೂರು ಇಷ್ಟವಿರಲಿಲ್ಲ" ಅಂದ.

ಸೌಗಂಧಿ ನಿಧಾನಕ್ಕೆ ಅವನ ಸಮೀಪ ಬಂದಳು."ಹೂಂ! ನಿನ್ನ ಫೋಟೋ ನಿನಗೇ ಇಷ್ಟವಾಗಿರ್ಲಿಲ್ಲ ಅಲ್ಲಾ? ನಿನ್ನಲ್ಲಿ ಇಷ್ಟ ಪಡೋಂಥದ್ದು ಏನಿದೆ ಹೇಳಯ್ಯ? ಈ ನಿನ್ನ ಡೊಂಕ ಮೂಗೊ! ಕೂದಲು ತುಂಬಿಕೊಂಡ ಇಕ್ಕಟ್ಟು ಹಣೆಯೋ! ಊದಿಕೊಂಡಿರೊ ಆ ಮೂಗಿನ ಹೊಳ್ಳೆಗಳೋ! ಸೊಟ್ಟಗಿನ ಕಿವಿಗಳೋ! ಗಬ್ಬು ಉಸಿರೋ! ಕೊಳಕಾದ ಮೈಯೋ! ತೊಪ್ಪೆ ಎಣ್ಣೆ ಮೆತ್ತಿಕೊಂಡಿರೋ ಈ ನಿನ್ನ ಕೂದಲೋ! ಅಹಾ! ಆ ನಿನ್ನ ಫೋಟೊ ನಿಂಗೆ ಇಷ್ಟ ಇರ್ಲಿಲ್ಲ ಅಲ್ಲ್ವೇನಯ್ಯ?" ಅಂದಳು.

ಮಧು ಮೆಲ್ಲಗೆ ಗೋಡೆಗೆ ಬೆನ್ನು ತಾಗುವವರೆಗೂ ಅವಳಿಂದ ದೂರ ಹಿಮ್ಮೆಟ್ಟಿದ. ಧ್ವನಿಯಲ್ಲಿ ಒಂಚೂರು ದರ್ಪ ತಂದುಕೊಂಡು "ನೋಡು ಸೌಗಂಧಿ... ನೀನು ನಿನ್ನ ಹಳೆ ದಂಧೆಗೆ ಮತ್ತೆ ಜಾರಿದ್ದೀಯ ಅಂತ ಕಾಣ್ತದೆ. ಕೊನೆ ಸಾರಿಗೆ ಹೇಳ್ತಿದ್ದೇನೆ..." ಅನ್ನತೊಡಗಿದ.

ಸೌಗಂಧಿ, "ನೀನು ಆ ನಿನ್ನ ಆ ಹೊಲಸು ದಂಧೆಗೆ ಮತ್ತೇ ಜಾರಿದರೆ, ಅಲ್ಲಿಗೆ ಕತೆ ಮುಗಿತು. ಇನ್ನೊಬ್ಬನ ಜೊತೆ ನೀನು ಹಾಸಿಗೆಯಲ್ಲಿ ಮಲಗಿದ್ದು ಕಂಡ್ರೆ, ಮುಡಿ ಹಿಡಿದು ದರ ದರ ಎಳ್ಕೊಂಡು ಹೋಗಿ ಬೀದಿಗೆಸೆತ್ತೇನೆ. ನಿಂಗೆ ತಿಂಗಳ ಖರ್ಚಿಗೆ ಕಾಸು ಬೇಕು ತಾನೇ! ಪುಣೆಗೆ ಹೋದ ತಕ್ಷಣವೇ ಮನಿ ಆರ್ಡರ್ ಕಳಿಸ್ತೇನೆ. ಈ ನಿನ್ನ ಕೋಣೆಗೆ ಎಷ್ಟು ಬಾಡಿಗೆ ಅಂದೆ?" ಎಂದು ಅವನನ್ನು ಅಣಕಿಸತೊಡಗಿದಳು.

ಮಧು ಹೌಹಾರಿ ಕೇಳುತ್ತಿದ್ದ.

ಸೌಗಂಧಿ ಮಾತಿನ್ನೂ ಮುಗಿದಿರಲಿಲ್ಲ. "ನನ್ನ ತಿಂಗಳ ಖರ್ಚು ಎಷ್ಟು ಅಂತ ಕೇಳ್ತಿಯಾ? ಹದಿನೈದು ರೂಪಾಯಿ. ಮತ್ತೆ ನನ್ನ ಮೈಗೆಷ್ಟು ಬಾಡಿಗೆ ಅಂತ ಕೇಳ್ತಿಯಾ? ಹತ್ತು ರೂಪಾಯಿ. ಅದರಲ್ಲಿ ರಾಮ್‌ಲಾಲಗೆ ಬರೋಬರಿ ಎರಡು ರೂಪಾಯಿ ಎಂಟಾಣೆ ಹೋಗುತ್ತೆ. ಮಿಕ್ಕೋದು ಏಳು ರೂಪಾಯಿ ಎಂಟಾಣೆ. ಇಷ್ಟಕ್ಕೆ ನಾನು ಗಂಡಸರಿಗೆ ಮೈಯೊಡ್ತಿನಿ. ನಮ್ಮಿಬ್ಬರ ನಡುವಿನ ಸಂಬಂಧ ಏನಯ್ಯ? ಹತ್ತು ಬರಿ ಹತ್ತೇ ರೂಪಾಯಿ ಸಂಬಂಧ. ಪ್ರತಿ ಸಾರಿ ಬರ್ತೀಯ, ಹಣ ಸೇರ್ದ ಹಾಗೆ ಎಲ್ಲಾನೂ ದೋಚಿ ಹೋಗ್ತಿಯ. ಸಂಬಂಧ ಹತ್ತು ರೂಪಾಯಿದಿತ್ತು. ಅದಿವತ್ತು ಐವತ್ತು ರೂಪಾಯಿದಾಗಿದೆ" ಅನ್ನುತ್ತ ತನ್ನ ಒಂದೇ ಬೆರಳಿಂದ ಅವನ ತಲೆಯ ಮೇಲಿನ ಟೋಪಿ ಎಗುರಿಸಿದಳು. ಅದು ಎಗರಿ ನೆಲಕ್ಕೆ ಬಿತ್ತು.

"ಸೌಗಂಧಿ" ಎಂದು ಮಧು ಬೊಬ್ಬೆ ಹಾಕಿದ.

ಅವಳು ಕ್ಯಾರೇ ಅನ್ನಲಿಲ್ಲ. ಅವನ ಕಿಸೆಯಿಂದ ದಸ್ತಿ ಹೊರಗೆಳೆದು ತನ್ನ ಮೂಗಿನ ಹತ್ತಿರ ಹಿಡಿದು ವಾಕರಿಕೆ ಮುಖ ಮಾಡಿ "ಕೊಳಕು ನಾರ್ತದೆ! ನೀನು, ನಿನ್ನ ಟೊಪ್ಪಿ, ನೀನು ಬಟ್ಟೆ ಅಂತ ತೊಟ್ಟಿರೊ ಚಿಂದಿ, ಎಲ್ಲಾ ಕೊಳಕು ನಾರ್ತವೆ. ಈಗ್ಲೇ ಇಲ್ಲಿಂದ ತೊಲಗು" ಅಂದಳು.

ಅವನು ಮತ್ತೊಮ್ಮೆ "ಸೌಗಂಧಿ" ಎಂದು ಚೀರಿದ.

ಅವಳು ತಿರುಗಿ ಹೊಡೆದಳು– "ಹುಳ, ಹುಳ ನೀನು! ಯಾಕಯ್ಯ ಬರ್ತೀಯ ಇಲ್ಲಿ? ನಿನ್ನ ಖರ್ಚಿಗೆ ಕಾಸು ಕೊಡೋಕೆ ನಾನೇನು ನಿನ್ನ ಹಡೆದ ತಾಯಿನ? ಅಹಾ! ನಾನು ನಿನ್ನ ಮೋಹಪಾಶದಲ್ಲಿ ಬಿಳೋಕೆ ನೀನೇನು ಮೋಹನಾಂಗನೆನ್ನಯ್ಯ? ಕಂತ್ರಿ ನಾಯಿ ನೀನು. ನನ್ನ ಮೇಲೆ ದರ್ಪ ತೋರಿಸ್ತೀಯ! ನೀನೇನೂ ಅಲ್ಲ ನಂಗೆ. ನೀನೊಬ್ಬ ತಿರುಬೋಕಿ. ಏನಯ್ಯ ನಿನ್ನ ಯೋಗ್ಯತೆ? ನಿನ್ನೊಬ್ಬ ಕನ್ನ ಹಾಕೋ ಕಳ್ಳನಾ, ಕಿಸೆಗಳ್ಳನಾ? ಈ ಹೊತ್ತಲ್ಲದ ಹೊತ್ತಲ್ಲಿ ಈ ಮನೆಗೆ ಯಾಕ್ ಬಂದಿದೀಯ? ಪೊಲೀಸರನ್ನ ಕರಿಲಾ? ಪೂಣೆಯಲ್ಲಿ ನಿನ್ನ ಮೇಲೆ ಕೇಸು ಇದೆಯೋ ಇಲ್ವೋ ಬಾಂಬೆಯಲ್ಲಂತೂ ಒಂದು ಕೇಸು ಬೀಳುತ್ತೆ ಹುಷಾರ್!"

ಮಧು ಪದರುಗುಟ್ಟತೊಡಗಿದ. "ಸೌಗಂಧಿ! ಏನು ಮೆಟ್ಕೊಂಡಿದಿಯೇ ನಿನ್ನ?" ಅಂದ.

"ನೀನ್ಯಾವನಯ್ಯ ಅದನ್ನ ಕೇಳೋಕೆ? ಈಗ್ಲೇ ಇಲ್ಲಿಂದ ತೊಲಗು" ಎಂದು ಗುರಾಯಿಸಿದಳು. ಅಷ್ಟು ಹೊತ್ತು ತೆಪ್ಪಗೆ ಮಲಗಿದ್ದ ಅವಳ ನಾಯಿ ಚಂಗನೆ ಎದ್ದು ಬಂದು ಮಧುವಿಗೆ ಬೊಗಳತೊಡಗಿತು. ಸೌಗಂಧಿ ಮೈಮೇಲೆ ಬಂದವರ ಹಾಗೆ ನಗತೊಡಗಿದಳು.

ಮಧು ನೆಲದ ಮೇಲೆ ಬಿದ್ದಿರೊ ತನ್ನ ಟೊಪ್ಪಿಯನ್ನು ಎತ್ತಿಕೊಳ್ಳೋಕೆ ಬಗ್ಗಿದ. "ಮುಟ್ಟ ಬೇಡ! ಅಲ್ಲೇ ಬಿದ್ದಿರ್ಲಿ ಅದು. ನೀನು ಪುಣೆ ಸೇರಿದಾಕ್ಷಣ ಅದನ್ನು ನಿಂಗೆ ಮನಿ ಆರ್ಡಾರ್ ಮಾಡ್ತೀನಿ" ಅಂತ ಅವಳು ಗದರಿ, ಮತ್ತೇ ನಗತೊಡಗಿದಳು. ನಗು ನಗುತ್ತಾ ಕುರ್ಚಿಯಲ್ಲಿ ಕುಸಿದು ಕೂತಳು. ಆ ಹೊತ್ತಿಗೆ ನಾಯಿಯು ಮಧುವನ್ನು ಬೆನ್ನತ್ತಿ ಬೀದಿಗೆ ತಳ್ಳಿ, ತನ್ನ ವಿಕಾರ ಮೋಟು ಬಾಲ ಅಲ್ಲಾಡಿಸುತ್ತಾ, ಕಿವಿ ನಿಮಿರಿಸಿಕೊಂಡು ಬಂದು ಸೌಗಂಧಿಯ ಕಾಲ ಬಳಿ ಕೂತು, ಸುತ್ತಲ ವಾತಾವರಣವೆಲ್ಲ ಸ್ತಬ್ಧವಾಗಿತ್ತು. ಅರೆಗಳಿಗೆ ಸೌಗಂಧಿ ಭಯದಲ್ಲಿ ನಡುಗಿದಳು. ಪ್ರಯಾಣಿಕರನ್ನೆಲ್ಲ ಇಳಿಸಿ, ನಿಲುಗಡೆ ತಾಣದಲ್ಲಿ ನಿಂತಿರುವ ರೈಲು ಬೋಗಿಯ ಹಾಗೆ ತಾನೂ ಖಾಲಿಯಾದಂತೆ ಸೌಗಂಧಿಗೆ ಅನಿಸಿತು.

ಹಾಗೆ ತುಂಬ ಹೊತ್ತು ಕುರ್ಚಿಯಲ್ಲಿ ಕೂತಿದ್ದಳು. ನಂತರ ಮೆಲ್ಲನೆ ಎದ್ದಳು. ನಾಯಿಯನ್ನು ಎತ್ತಿ ತುಂಬ ಜತನದಿಂದ ಮಂಚದ ಮೇಲೆ ಮಲಗಿಸಿದಳು. ಅದರ ಪಕ್ಕ ಮಲಗಿ, ಅದರ ದರಿದ್ರ ಮೈಮೇಲೆ ತೋಳು ಹಾಕಿ ನಿದ್ದೆ ಹೋದಳು.

❑

*'ನಮ್ಮ ಮಾನಸ'ಕ್ಕೆ ಲೇಖನ, ವಿಮರ್ಶೆ, ಕವನಗಳನ್ನು*
*ಇ–ಮೇಲ್ ಮೂಲಕ ಕಳುಹಿಸುವವರು ನುಡಿ ಲಿಪಿಯಲ್ಲಿ ಮಾತ್ರ ಕಳುಹಿಸಿ.*



# ಭಾಂವ್ರಿಯವರ ಸನಿಹದಲ್ಲೊಂದು ದಿನ

■ ಶೀತಲ ಭಟ್

ಭಾಂವ್ರಿಯವರ ಕುರಿತು ಏನನ್ನು ಬರೆಯಹೊರಟರೂ ಅವರ ಅನನ್ಯ ವ್ಯಕ್ತಿತ್ವವನ್ನು ಹಿಡಿಯಲಾಗದೆ ಸುಳ್ಳು ತೋರಿಕೆ ಆಗಿಬಿಡಬಹುದೆಂಬ ಭಯ ನನಗೆ. ಫೆಮಿನಿಸಂ ಅನ್ನು ಓದುತ್ತಾ ಅದರೊಂದಿಗೆ ನಮ್ಮ ಅನುಭವಗಳನ್ನು ಸಮೀಕರಿಸಿಕೊಳ್ಳಲಾಗದೇ ಒದ್ದಾಡುವ ತಲೆಮಾರಿನವರಾದ ನಾವು ಇಂತಹ ಯಾವ ಇಸಂ ಅನ್ನು ಬಾಹ್ಯವಾಗಿ ಆರೋಪಿಸಿಕೊಳ್ಳದೇ ತೀವ್ರವಾಗಿ ಬದುಕುವ, ಸುತ್ತಲಿರುವ ಗೆಳತಿಯರನ್ನು ಪ್ರೀತಿಸುತ್ತಾ, ಅನ್ಯಾಯದ ವಿರುದ್ಧ ಹೋರಾಡುತ್ತಾ ಜೀವಿಸುತ್ತಿರುವ ಸರಳ ಜೀವಿ ಭಾಂವ್ರಿಯವರೊಂದಿಗೆ ಕಳೆದ ಒಂದು ದಿನದಲ್ಲಿ ಕಲಿತದ್ದು, ಅಚ್ಚರಿಗೊಂಡದ್ದು, ಆಶಿಸಿದ್ದು ಬಹಳಷ್ಟನ್ನು.

ಪ್ರಾಥಮಿಕ ಶಾಲೆಯಲ್ಲಿ 'ಬಾಲ್ಯವಿವಾಹ ತಡೆದ ಭಾಂವ್ರಿದೇವಿ' ಎಂಬ ಪಾಠ ಓದಿ ಭಾಂವ್ರಿದೇವಿಯ ಪುಟ್ಟ ಪರಿಚಯ ಮಾಡಿಕೊಂಡಿದ್ದ ನಾನು ಅವರ ಜೀವನದ ಬಗ್ಗೆ ಇನ್ನಷ್ಟು ತಿಳಿದುಕೊಂಡಿದ್ದು 'ನಮ್ಮ ಮಾನಸ' ಏರ್ಪಡಿಸಿದ್ದ ಭವಂದರ್ ಸಿನಿಮಾ ಪ್ರದರ್ಶನ ಹಾಗೂ ಲಕ್ಷ್ಮೀದೇವಿಯವರೊಂದಿಗಿನ ಸಂವಾದದಿಂದ. ಭಾಂವ್ರಿಯವರ ಜೀವನದ ಕತೆಯೇ ಯಾರನ್ನಾದರೂ ಕಲಕುವಂಥದ್ದು. ಅಂತಹ ತೀವ್ರವಾದ ಬದುಕನ್ನು ಬದುಕಿದ ದಿಟ್ಟ ಮಹಿಳೆಯನ್ನು ನಾವು ಮಾರ್ಚ್ 9 ರಂದು 'ಲೇಖಕಿಯರ ಸಂಘ' ಹಾಗೂ 'ನಮ್ಮ ಮಾನಸ' ಇತರ ಸಂಘಟನೆಗಳ ಸಹಯಾನದಲ್ಲಿ ನಡೆಸಿದ ಕಾರ್ಯಕ್ರಮದಲ್ಲಿ ನೋಡುತ್ತೇವೆ ಎಂಬುದೇ ನಮಗೆ ಪುಳಕ ಹುಟ್ಟಿಸುತ್ತಿತ್ತು.

ಲಂಬಾಣಿ ಸಂಪ್ರದಾಯದ ಉಡುಗೆ ಧರಿಸಿ ಬಂದಿದ್ದ ಆಕೆ ವೇದಿಕೆಯ ಯಾವ ಶಿಷ್ಟಾಚಾರಗಳಿಗೂ ಒಳಗಾಗದೇ ತೀರ ಸರಳವಾಗಿದ್ದರು. ಲಂಬಾಣಿ ಭಾಷೆಯಲ್ಲಿಯೇ ಮಾತನಾಡಿದರು. ಹತ್ತಿರ ಹೋದ ನಮ್ಮೆಲ್ಲರ ತಲೆ ಸವರಿ ಪ್ರೀತಿ ತೋರಿಸುತ್ತಿದ್ದರು. ಇಂತಹ ಮೃದು ವ್ಯಕ್ತಿತ್ವದ ಒಳಗೆ ಹೋರಾಟದ ಕಿಚ್ಚನ್ನು ಸದಾ ಜಾಗೃತವಾಗಿರಿಸಿಕೊಂಡ ವ್ಯಕ್ತಿತ್ವವೂ ಇದೆಯೇ ಎಂದು ಅಚ್ಚರಿಯಾಗುತ್ತಿತ್ತು. ನಂತರ ಬಂದ ಪತ್ರಕರ್ತರಿಗೆ ಸಂದರ್ಶನ ನೀಡಿದರು. ಅಲ್ಲಿದ್ದ ನಮ್ಮಂಥ ಕಿರಿಯರನ್ನು ಸೇರಿಸಿಕೊಂಡು eve teasing ನಂತಹ ಪಿಡುಗುಗಳನ್ನು ಹೇಗೆ ಎದುರಿಸಬೇಕೆಂಬ ಪುಟ್ಟ ಪಾಠವೂ ನಡೆಯಿತು.

ಅಲ್ಲಿಂದ ಕೊಳೆಗೇರಿಗಳ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕಾವೇರಿ ಹಾಗೂ ಅವರ ಸಂಗಡಿಗರ ಮನೆಗೆ ಹೋದೆವು. ಭಾಂವ್ರಿಯವರನ್ನು ಪತ್ರಕರ್ತರು ಅವರ ಕಾರಿನಲ್ಲಿ ಕರೆದುಕೊಂಡು ಬರುವುದೆಂದಾಯಿತು. ಮನೆ ತಲುಪಿದ ಬಳಿಕವೂ ಭಾಂವ್ರಿರವರನ್ನು ಅವರ ಮೇಲೆ ನಡೆದ ಆಕ್ರಮಣದ ಬಗ್ಗೆಯೇ ಕೇಳುತ್ತಾ, ಅಲ್ಲಿ ನಿಲ್ಲಿ, ಇಲ್ಲಿ ನಿಲ್ಲಿ ಎಂದು ಫೋಟೋ ತೆಗೆದುಕೊಳ್ಳುತ್ತಾ ನೋಯಿಸುತ್ತಲೇ ಇದ್ದ ಪತ್ರಕರ್ತರಿಂದ ಬೇಸತ್ತ ಸರಸ್ವತಿಯವರು ತಾಳ್ಮೆಗೆಟ್ಟು ಕಿರುಚಾಡಿ ಕಣ್ಣೀರೆರೆದರು. ಅವರನ್ನು ನೋಡಿ ಭಾಂವ್ರಿಯವರೂ ಅಳತೊಡಗಿದರು. ಗಾಬರಿಗೊಂಡ ಪತ್ರಕರ್ತರೆನೋ ಅಲ್ಲಿಂದ ಕಾಲ್ಕಿತ್ತರು. ಆದರೆ ಅನ್ಯಾಯ, ನಿರಾಸೆಗಳ ಸರಮಾಲೆಯನ್ನೇ ಬದುಕಿನುದ್ದಕ್ಕೂ ಎದುರಿಸಿದರೂ ಧೃತಿಗೆಡದ ಧೈರ್ಯವಂತೆ, ಗೆಳತಿಯರ ಕಣ್ಣೀರಿಗೆ ಕಣ್ಣೀರಾಗುವುದ ಕಂಡು ಮಹಿಳಾವಾದವೆಂದರೆ ಇದೇ ಇರಬಹುದೇ ಎಂದು ಬೆರಗುಗಣ್ಣುಗಳಿಂದ ನೋಡುತ್ತಿದ್ದುವು.

ಊಟವಾದ ಬಳಿಕ ತೀರ ದಣಿದಿದ್ದರೂ ವಿಶ್ರಾಂತಿ ತೆಗೆದುಕೊಳ್ಳಲು ನಿರಾಕರಿಸಿ ನಮಗೆಲ್ಲಾ ಹೋರಾಟದ ಒಂದಿಷ್ಟು ಹಾಡುಗಳನ್ನು ಹೇಳಿಕೊಟ್ಟರು. ಸಂಜೆ ALFನಲ್ಲಿ ಕಾರ್ಯಕ್ರಮ ನಿಗದಿಯಾಗಿತ್ತು. ಅಲ್ಲಿಗೆ ಹೋಗಿ ಕೇಳಿದ ಎಲ್ಲಾ ಪ್ರಶ್ನೆಗಳಿಗೂ ಸಂಯಮದಿಂದ ಉತ್ತರ ನೀಡಿದರು. ಇಂದಿಗೂ ಸಾಥಿನ್ ಆಗಿ ಕೆಲಸ ಮಾಡುತ್ತಿರುವ ಸ್ನೇಹಿತೆಯರ ಕಷ್ಟಗಳ ಕುರಿತು ಮಾತನಾಡಿದರು. ತೀವ್ರ ಆಕ್ರಮಣಕ್ಕೊಳಗಾಗಿ, ವ್ಯವಸ್ಥೆ, ಪುರುಷಪ್ರಧಾನ ಸಮಾಜ, ಜಾತಿ ವ್ಯವಸ್ಥೆಯ ಬಲಿಪಶು ಆಗಿ ಆರೋಪಿಗಳಿಗೆ ಶಿಕ್ಷೆ ಕೊಡಿಸಲು ವಿಫಲರಾಗಿ, ಅವರೆಲ್ಲರ ತಮ್ಮ ಮುಂದೆ ರಾಜಾರೋಷವಾಗಿ ತಮ್ಮ ಮುಂದೇ ಬದುಕುವುದ ಕಂಡೂ ನಿರಾಶೆಗೊಳಗಾಗದ ಈಕೆ 'ನಿಮ್ಮ ಮಗಳ ಜತೆಗೂ ಇಂತಹ ಅನ್ಯಾಯ ನಡೆಯಬಹುದೆಂಬ ಭಯವಿರಲಿಲ್ಲವೇ' ಎಂಬ ಪ್ರಶ್ನೆಗೆ 'ನನಗೆ ಎಂದಿಗೂ ಹಾಗೆನ್ನಿಸಿಲ್ಲ. ನನ್ನ ಮಗಳು ಚೆನ್ನಾಗಿ ಓದಿದಳು. ಅವಳೇ ನನ್ನನ್ನು ಇಷ್ಟು ದೂರ ಕರೆತಂದಿದ್ದು' ಎಂದು ಹೆಮ್ಮೆಯಿಂದ ನುಡಿದರು. ಅವರ ಜೀವನ ಪ್ರೀತಿ, ಧನಾತ್ಮಕ ಜೀವನದೃಷ್ಟಿ ಎಲ್ಲರಲ್ಲೂ ಸಂಚಲನವುಂಟುಮಾಡಿತು. "ನನಗೆ ಪ್ರಶಸ್ತಿಗಳಿಂದ ಹೊಟ್ಟೆ ತುಂಬುವುದಿಲ್ಲ. ನನ್ನ ಹೊಟ್ಟೆ ತುಂಬೋದು ನ್ಯಾಯದಿಂದ" ಅನ್ನೋ ಹೋರಾಟಗಾರ್ತಿ ಭಾಂವ್ರಿ ಮಹಿಳೆಯರ collective ಚಿಂತನೆ, ಹೋರಾಟದಲ್ಲಿ ಭರವಸೆಯಿಟ್ಟವರು. ಅವರು ಆಗಾಗ ಹೇಳುವ ಅವರ ಪ್ರೀತಿಯ ಹಾಡು ಮಹಿಳಾ ಹೋರಾಟ ಸಾಗಬೇಕಾದ ಮುಂದಿನ ದಾರಿಯ ಮೇಲೆ ಬೆಳಕು ಚೆಲ್ಲುತ್ತದೆ ಅನ್ನಿಸಿತು.

**ಚಾರ್ ದಿನ್ ಕಿ ಸಹೆಲಿ ಸಹೆಲಿ ನಹಿ**
**ಉಮರ್ ಭರ್ ಸಾಥ್ ದೇನೆ ಕಾ ವಾದಾ ಕರೊ**
**ಔರತ್ ಕೆ ಲಿಯೆ ಕುಚ್ ಮುಶ್ಕಿಲ್ ನಹಿ**
**ಖೂಬ್ ಚರ್ಚಾ ಚಲಾನೇಕಾ ವಾದಾ ಕರೊ**

❑



# ಸಾಥಿನ್

ಆ ಎರಡು ಜಡಗಟ್ಟಿದ ಕೈಗಳ ಗೆರೆಗಳಲ್ಲಿ,
ಚಿಗುರಿದೆ ನಮ್ಮ ಅಸ್ತಿತ್ವದ ಬೇರು.
ಕೆಸರಿನಲ್ಲಿ ಬೆಳೆಯಲು ಸಾಧ್ಯವಾದೀತು ಆವತ್ತು
ಆ ಹೆಣ್ಣಿನ ರೋಷದ ಕಾಂತಿಯ ನೆರಳಿನಿಂದ,
ಆಕಾಶ ಚುಂಬಿಸುವ ಕೊಂಬೆಗಳು ವಿಶಾಲವಾಗಿವೆ ಇವತ್ತು
ಆ ಹೆಣ್ಣಿನ ರೋಷದ ಕಾಂತಿಯ ನೆರಳಿನಿಂದ.

ಅವರ ಕಣ್ಣೀರಿನ ಪ್ರೋಷಣೆ ನಮಗೆ
ಅವರ ಹೋರಾಟದ ರಕ್ಷಣೆ ನಮಗೆ
ಅವರ ಅನಕ್ಷರತೆಯ ಶಿಕ್ಷಣ ನಮಗೆ
ಅವರ ಚರಿತ್ರೆಯ ಭವಿಷ್ಯ ನಮಗೆ
ನಮ್ಮ ಜೀವನದ ಸಾಥಿನ್,
ನಮ್ಮ ಕೈ ಹಿಡಿದು, ನಮ್ಮೊಂದಿಗೆ, ತಲೆ ಎತ್ತಿ ನಡೆ.

■ ನಿಹಾರಿಕಾ ಶೆಣೈ



ಖಾಸಗಿ ಪ್ರಸಾರಕ್ಕಾಗಿ

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು – 560 018